

# ಸಿದ್ಧಗಂಗಾ



ಆಗಸ್ಟ್ ೧೯೯೮

ಆಗಸ್ಟ್ ೮ರಂದು ಸಿಂಗಪುರದ ಮಿಂಗ್ ದಾಹೂ ಸಾಂಸ್ಕೃತಿಕ ಸಂಘದ ಸದಸ್ಯರು
ಶ್ರೀ ಕ್ಷೇತ್ರಕ್ಕೆ ಭೇಟಿ ನೀಡಿದ ಸಂದರ್ಭದಲ್ಲಿ ಪರಮ ಪೂಜ್ಯ ಶ್ರೀ ಶ್ರೀಗಳೊಂದಿಗೆ
ಚಿತ್ರದಲ್ಲಿ ಎಡದಿಂದ ಬಲಕ್ಕೆ - ಮಲೇಶಿಯಾದ ಕುಮಾರಿ ಚೊಂಗ್ ಹೂಯಿ ಜಿಯೂನ್,
ಥೈವಾನ್‌ನ ಶ್ರೀಮತಿ ಚೆನ್ ಥೈ ಜೆನ್, ಶ್ರೀ ಹೊ ಯಿಂಗ್ ಮಿ, ಸಿಂಗಪುರದ ಶ್ರೀ ಚಾಂಗ್ ಕಿಮ್ ಸಿಯಾಂಗ್
ಮತ್ತು ಶ್ರೀ ತಾನ್‌ತ್ಯಾಂಗ್ ತೆಂಗ್ ಅವರನ್ನು ಕಾಣಬಹುದು.

**ಪ್ರಧಾನ ಸಂಪಾದಕರು**
ಚೆನ್ನಪ್ಪ ಎರೇಸೀಮೆ

**ಸಂಪಾದಕರು**
ಹೆಚ್. ವಿ. ವೀರಭದ್ರಯ್ಯ

**ಸಹ ಸಂಪಾದಕರು**
ಎಚ್. ಎಸ್. ಸಿದ್ಧಗಂಗಪ್ಪ
ಎಂ. ರೇಣುಕಾರಾಧ್ಯ

**ಸಲಹಾ ಸಮಿತಿ**
ಡಾ. ಎಂ.ಎಸ್. ಚನ್ನಬಸಪ್ಪ
ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ
ಗೊ.ರು. ಚನ್ನಬಸಪ್ಪ
ಟಿ. ಕೆ. ನಂಜುಂಡಪ್ಪ
ಟಿ.ಆರ್. ಮಹಾದೇವಯ್ಯ
ಪ್ರೊ. ಆರ್. ರಾಚಪ್ಪ
ಪಿ.ಎಸ್. ಪುಟ್ಟಶಂಕರಯ್ಯ
ಬಿ. ಎಸ್. ಪರಮಶಿವಯ್ಯ

**ಸದಸ್ಯರು**
ಕೆ.ಎಸ್. ಶಂಕರಯ್ಯ
ಸಿ. ಎಸ್. ಸಿದ್ಧಲಿಂಗಯ್ಯ
ಪಿ. ವಿ. ಹುಚ್ಚವೀರಯ್ಯ
ಕೆ. ಸಿ. ಶಿವಗಂಗಯ್ಯ
ಎಸ್. ವಿಶ್ವನಾಥ್
ಪಿ.ಎನ್. ಚಂದ್ರಶೇಖರಯ್ಯ
ಕೆ.ಎಚ್. ಶಿವರುದ್ರಯ್ಯ

**ಪ್ರಕಾಶಕರು**
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-572 104

**ಮುದ್ರಕರು** :
ಗೀತಾಂಜಲಿ ಪ್ರಿಂಟರ್ಸ್, ನಂ. ೫,
ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
ಗೋಕುಲ, ಬೆಂಗಳೂರು-೫೪
ದೂರವಾಣಿ - ೩೩೪೪೦೮೭


**ಲೇಖಕರ ಅಭಿಪ್ರಾಯಗಳು ಶ್ರೀ ಮಠದ ಅಭಿಪ್ರಾಯಗಳಲ್ಲ**



॥ ಓಂ ಶ್ರೀ ಗುರು ಬಸವ ಲಿಂಗಾಯನಮಃ ॥

**ಆವಾವ ಕಾಯಕವ ಮಾಡಿದರು ಬಸವೇಶ**
**ಆವಗಂ ಶರಣರನು ಸೇವಿಪೆನು ಬಸವೇಶ**

# ಸಿದ್ಧಗಂಗಾ

**ಸಂಪುಟ : ೩೪ ಆಗಸ್ಟ್ ೧೯೯೮ ಸಂಚಿಕೆ : ೮**

## ಒಳಪುಟಗಳಲ್ಲಿ ......




| **ವಿಳಾಸ :** | **ಚಂದಾ ವಿವರ :** |
| --- | --- |
| "ಸಂಪಾದಕರು", 'ಸಿದ್ಧಗಂಗಾ' ಮಾಸಪತ್ರಿಕೆ,<br>ಶ್ರೀ ಸಿದ್ಧಗಂಗಾ ಮಠ,<br>ತುಮಕೂರು ಜಿಲ್ಲೆ-೫೭೨ ೧೦೪ | ವಾರ್ಷಿಕ ಚಂದಾ ರೂ. ೫೦.<br>ಆಜೀವ ಸದಸ್ಯತ್ವ ರೂ. ೫೦೦.<br>ಬಿಡಿ ಪ್ರತಿ ರೂ. ೫.00 |


**ಸಾಹಿತ್ಯ, ಕಲೆ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ, ಇತಿಹಾಸ, ವೈಚಾರಿಕ ಮೊದಲಾದ ಲೇಖನಗಳಿಗೆ ಸ್ವಾಗತವಿದೆ.**



## ಸಂಪಾದಕೀಯ....

"ವಿದ್ಯೆ ಬಂತು ವಿನಯಹೋಯ್ತು ಬುದ್ಧಿ ಬಂತು ಶ್ರದ್ಧೆ ಹೋಯ್ತು; ಶ್ರದ್ಧೆ ಬಂತು, ವಿವೇಚನೆ ಹೋಯ್ತು; ಸಮೃದ್ಧಿಬಂತು ಸಂಸ್ಕೃತಿ ಹೋಯ್ತು; ವಿಜ್ಞಾನ ಬಂತು ಸಮಾಧಾನ ಹೋಯ್ತು; ಶರೀರ ಸ್ವಾಥ್ಯ ಬಂತು, ಚಿತ್ತ ಸ್ವಾಸ್ಥ ಹೋಯ್ತು; ದೀರ್ಘಾಯುಷ್ಯ ಬಂತು ಜೀವನ ಸ್ವಾರಸ್ಯ ಹೋಯ್ತು; ಬೋಧನೆ ಬಂತು ಸಾಧನೆ ಹೋಯ್ತು; ಮಾತು ಬಂತು ಕೃತಿಯು ಹೋಯ್ತು; ಜಾತಿ ಬಂತು ಪ್ರೀತಿ ಹೋಯ್ತು; ಸ್ವಾತಂತ್ರ್ಯ ಬಂತು ಸೌಜನ್ಯ ಹೋಯ್ತು; ಸಿದ್ಧಯ್ಯ ಪುರಾಣಿಕ ಬಂದ, ಸ್ವತಂತ್ರಧೀರ ಸಿದ್ಧೇಶ್ವರ ಹೋದೆ!"

ಸಿದ್ಧಯ್ಯ ಪುರಾಣಿಕರ ಈ ವಚನ ಪ್ರಸ್ತುತ ಪರಿಸ್ಥಿತಿಗೆ ಕನ್ನಡಿ ಹಿಡಿದಿದೆ. ವ್ಯಾಖ್ಯಾನ ನಿರಪೇಕ್ಷವೆನಿಸಿದೆ. ಇದಕ್ಕಿಂತ ಪರಿಣಾಮಕಾರಿಯಾಗಿ ಇಂದು ನಡೆದಿರುವ ರಾಷ್ಟ್ರಜೀವನದ ಅಂತರಂಗವನ್ನು ಪರಿಚಯಿಸುವುದಾದರೂ ಹೇಗೆ? ಕಳೆದ ಐವತ್ತು ವರ್ಷಗಳಿಂದ ನಾವು ಬಿತ್ತಿ ಬೆಳೆದದ್ದು ಜೀವನದ ಎಲ್ಲ ಮೌಲ್ಯಗಳ ನಿರಾಕರಣೆಯನ್ನು. ದೇಶಕ್ಕೆ ಸ್ವಾತಂತ್ರ್ಯ ತಂದುಕೊಟ್ಟ ಪುಣ್ಯ ಚೇತನಗಳಲ್ಲಿ ಕೆಲವು ಇಂದಿಲ್ಲ. ಸ್ವಾತಂತ್ರ್ಯದ ಕಾಗುಣಿತವನ್ನೂ ಅರಿಯದ ಮನಸ್ಸುಗಳು ಇಂದು ದೇಶವನ್ನಾಳುತ್ತಿವೆ (ಅಲ್ಲೊಂದು ಇಲ್ಲೊಂದು ನಿರ್ಮಲ ಅಂತಃಕರಣಗಳನ್ನುಳಿದು). ಸಮಸ್ಯೆಗಳ ಸುಳಿಯಲ್ಲಿ ಇಂದಿನ ಮತ್ತು ಮುಂದಿನ ಭಾರತೀಯರನ್ನು ಮುಳುಗಿಸಿ ಬಿಟ್ಟಿರುವುದೇ ಜನನಾಯಕರು ಮಾಡಿರುವ ಮಹಾಸಾಧನೆಯಾಗಿದೆ. ನೆಲ, ಜಲ, ಭಾಷೆ, ಜಾತಿ, ಧರ್ಮ ಎಂದು ಸಮಸ್ಯೆಗಳ ಸೃಷ್ಟಿಯಲ್ಲಿ "ಸ್ವತಂತ್ರಧೀರ"ರಾಗಿದ್ದಾರೆ. ಪ್ರತಿಭಾ ದಾರಿದ್ರ್ಯತೆಯ ಸಂಕೇತವಾಗಿದ್ದಾರೆ. ದೊಡ್ಡದಾಗಬೇಕಾಗಿದ್ದ ಮನಸ್ಸುಗಳೆಲ್ಲ ಕುಬ್ಜವಾಗುತ್ತಲೇ ನಡೆದಿವೆ. ಸ್ವತಂತ್ರ ಭಾರತದ ಗಂಗೆ ಮಲಿನವಾಗಿದ್ದಾಳೆ. ಭಾರತೀಯ ಶ್ರೀ ಸಾಮಾನ್ಯನ ಶೋಷಣೆ ವಿನೂತವಾಗಿ ನಡೆದಿದೆ.

ಸ್ವಾತಂತ್ರ್ಯ ಪೂರ್ವದಲ್ಲಿ ಭಾರತದ ಆಡಳಿತ ವಿದೇಶಿಯರದಾಗಿತ್ತು. ಆದರೆ ಭಾರತದ ಮನಸ್ಸು ಅಖಂಡವಾಗಿತ್ತು, ಪವಿತ್ರವಾಗಿತ್ತು. ಇಂದು ನಮ್ಮವರದೇ ಆಡಳಿತ. ಆದರೆ ಮನ್ಸಸು ಒಡೆದ ಕನ್ನಡಿ ಹರಳು. "ಬೇಕಾದದ್ದು ಹೋಗಿ ಬೇಡವಾದದ್ದು ಬಂತು; ಸಹಜವಾದದ್ದು ಹೋಗಿ ಕೃತಕವಾದದ್ದು ಬಂತು." ಅಂದುಕೊಂಡದ್ದು ಒಂದು; ಆದದ್ದು ಮತ್ತೊಂದು. ರಾಷ್ಟ್ರಜೀವನವನ್ನು ಕೆಡಿಸುವ ರಾಕ್ಷಸ ಪ್ರವೃತ್ತಿಯ ಪಾರ್ಥೇನಿಯಂ ಬೆಳೆದದ್ದೊಂದೇ ಸ್ವಾತಂತ್ರ್ಯ ಫಲವಾಗಿದೆ.

ಯುವ ಜನಾಂಗವಂತೂ ಆದರ್ಶದ ಮಾರ್ಗದರ್ಶನದಿಂದ ವಂಚಿತರಾಗುತ್ತಿದ್ದಾರೆ. ಹಣ, ಅಧಿಕಾರ ಮತ್ತು ಭೋಗ ಜೀವನದ ದಾಸರಾಗುತ್ತಿದ್ದಾರೆ. "ತತ್ವರಹಿತ ರಾಜಕಾರಣ, ಶ್ರಮರಹಿತ ಸಂಪ್ತತು, ನೀತಿ ಹೀನ ವ್ಯಾಪಾರ, ಶೀಲ ಶೂನ್ಯ ಶಿಕ್ಷಣ, ಮನಸ್ಸಾಕ್ಷಿಯಿಲ್ಲದ ಭೋಗ, ಮನುಷ್ಯತ್ವ ವಿರಹಿತ ವಿಜ್ಞಾನ, ತ್ಯಾಗವಿಹೀನ ಪೂಜನ ಏನೇನು ಈ ದೇಶದಲ್ಲಿ ಬರಬಾರದೆಂದು ಹೆಣಗಿ ಹೆಣಗಿ ಬಲಿಯಾದೆಯೋ ಆ ಅನಿಷ್ಟಗಳೆಲ್ಲ ಬಂದಿವೆಯಿಲ್ಲಿ ಬಾಪೂಜಿ".

ಇಷ್ಟಾಗಿಯೂ ಭಾರತದ ಅಂತಶ್ಶಕ್ತಿ ಅದಮ್ಯವಾಗಿ ಪುಣ್ಯದಿನಗಳನ್ನೂ ಕಾಣುವ ಕನಸನ್ನು ಕಾಣುತ್ತಲೇ ಮುಂದುವರಿದಿದೆ ಎಂಬುದು ಮಾತ್ರ ಸಮಾಧಾನಕರವಾಗಿದೆ.

೧೯೯೮ರ ಆಗಸ್ಟ್ ೧೫ ಎಲ್ಲರಿಗೂ ಮಂಗಳವನ್ನುಂಟುಮಾಡಲಿ ಎಂದು 'ಸಿದ್ಧಗಂಗಾ' ಹಾರೈಸುತ್ತದೆ.

-- **ಸಂಪಾದಕ**





## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಓದಿದ್ದು ವಿಜ್ಞಾನ ಆದದ್ದು ಶಿವಜ್ಞಾನ
ಬೋಧಿಸಿದ್ದೆಲ್ಲರಿಗೆ ನಿಜಜ್ಞಾನ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಜನ್ಮಜನ್ಮಾಂತರ ಕೊಳೆಯ ತೊಳೆಯಲು ಬಂದ
ಪರಮ ಪಾವನ ಹೊನಲೆ ನಿರ್ಮಲವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಮಮಕಾರರಾಹಿತ್ಯ ಶಿವತಾಣವೆ ಮಠವೆಂದೆ
ಭೂಮಿತಾಯಿ ಮುಡಿದ ಹೂವೆಂದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಗರಿಕೆಯ ಹರಸೀದೆ ಮರವಾಗಿ ಬೆಳೆಸೀದೆ
ಅರಿವಿನಾಗರವಾಗಿ ಅರಳೆಂದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ನೆಲಕೆಮಂಗಳವಾಗಿ ಬೆಳಗಿರುವೆ ಶಿವಬೆಳಕೆ
ನಭವೆ ಹರಸಿರುವಂಥ ಕುರುಣೆಯ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಮುರಿದ ಮನಗಳನೆಲ್ಲ ಸರಿಪಡಿಸುತ ನಡೆದಿರುವೆ
ಸಿರಿಯ ಶಿವಕಾಯಕವ ನಡೆಸಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಮಠದಿಂದ ಘಟವಲ್ಲ ಘಟದಿಂದ ಮಠವೆಂದೆ
ಹಟವಿರಲಿ ಎದೆಯೊಳಗೆ ಬೋಧಿಸಿದೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಮನದ ಮೈಲಿಗೆ ಕಳೆವ ಘನ ಶಿವಸಲಿಲವೆ
ಅನುದಿನ ಸ್ಮರಿಸುವೆ ನಿರುತದಲಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಮಲಗುವೆ ನೀಗುರುವೆ ಸೇವೆ ಸಂಪಿಗೆ ಮುಡಿದು
ಏಳುವೆ ಘಮಘಮಿಸಿ ಅರಳಿಸಲು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಒಳಗೆ ಮೆಲುದನಿವೀಣೆನುಡಿದಿರಲು ಪರಹಿತವ
ಇಳೆಗದ ಮೊಳಗಿಸಿದೆ ಹದವರಿತು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

-- **ಹೆಚ್. ವಿ. ವೀರಭದ್ರಯ್ಯ**



## ಶ್ರೀ ವಾಣಿ

ಸ್ವಾತಂತ್ರ್ಯವೆಂದರೆ ಸ್ವೈರಾಚಾರವಲ್ಲ, ಸ್ವಚ್ಛಂದ ಪ್ರವೃತ್ತಿಯಲ್ಲ. ಅದೊಂದು ಆತ್ಮವಿಕಾಸಕ್ಕೆ ರಕ್ಷೆ. ಅದಕ್ಕೆ ಒಂದು ಕತೆ ನೆನಪಿಗೆ ಬರುತ್ತಿದೆ :-

ಒಂದು ಊರಿನಲ್ಲಿ ಒಂದು ಕುರಿ ಮಂದೆ ಇದ್ದಿತು. ಹಗಲೆಲ್ಲಾ ಕುರುಬನ ರಕ್ಷೆಯಲ್ಲಿರುತ್ತಿತ್ತು. ರಾತ್ರಿಯ ಹೊತ್ತು ಕುರಿ ಮಂದೆರೊಪ್ಪದಲ್ಲಿರುತ್ತಿತ್ತು. ಮಂದೆಗೆ ಸದಾ ಅಂತೂ ಒಂದಲ್ಲ ಒಂದು ರೀತಿಯಲ್ಲಿ ಕಾವಲು ಇದ್ದೇ ಇರುತ್ತಿದ್ದಿತು. ಯಾವೊಂದು ಕುರಿಯೂ ಎಂದೂ ಮಂದೆ ಬಿಟ್ಟು ಹೋಗುವಂತಿರಲಿಲ್ಲ. ಒಡೆಯನ ಆಜ್ಞೆಯನ್ನು ಅವು ಚಾಚೂ ತಪ್ಪದೆ ಸುಖವಾಗಿದ್ದವು. ಆದರೆ ಒಂದು ಎಳೆ ಕುರಿ ಮಾತ್ರ ಸದಾ ಅತೃಪ್ತಿಯ ಅಗ್ನಿ ಕುಂಡದಲ್ಲಿ ಕುದಿಯುತ್ತಿತ್ತು. ಅದಕ್ಕೆ ಬದುಕು ಯಾಂತ್ರಿಕವಾಗಿ ಕಂಡಿತು. ಬಂಧಿತವಾಗಿ ಭಾಸವಾಯಿತು. ತರುಣ ರಕ್ತದ ಎಳೆ ಕುರಿಗೆ ಬಂಧನದ ಬೇಲಿಯ ಬದುಕನ್ನು ಕಿತ್ತೊಗೆದು ಹೊರಕ್ಕೆ ಹೋಗಿ ಸಾಹಸ ಕಾರ್ಯಗಳನ್ನೆಸಗುವ ಪ್ರವೃತ್ತಿ ದಿನೇ ದಿನೇ ಹೆಚ್ಚಿತು. ತನ್ನ ಸಂಗಡಿಗರನ್ನ ಪ್ರಚೋದಿಸಿತು. ಆದರೆ ಯಾವೂ ಅದರ ಕ್ರಾಂತಿಕಾರಿ ಮನೋಭಾವಕ್ಕೆ ಸೊಪ್ಪು ಹಾಕಲಿಲ್ಲ. ಇದು ಸಿಡಿಮಿಡಿಕೊಂಡಿತು. ಅದಕ್ಕೆ ನಿರ್ವೀರ್ರ್ಯರ ಸಂಗಡಿಗರ ಜೊತೆಯ ಬದುಕು ಅಸಹ್ಯವಾಗಿ ಕಂಡಿತು. ಸಮಯಕ್ಕಾಗಿ ಕಾತರವಾಗಿ ಕಾದುನಿಂತಿತು. ಒಂದು ರಾತ್ರಿ ಎಲ್ಲೆಲ್ಲೂ ಹಾಲು ಚೆಲ್ಲಿದಂತೆ ಬೆಳದಿಂಗಳು. ಎಳೆ ಕುರಿಗೆ ಹೊರಗೆ ಹೋಗಿ ಅಡ್ಡಾಡಿ ಬರುವ ಮನಸ್ಸಾಯಿತು. ಆಗ ಸರಿಹೊತ್ತು, ನಿದ್ರೆ ಹೊದಿಕೆಯಾಗಿ ಮೌನ ರಾಜ್ಯವಾಳುತ್ತಿತ್ತು. ಅತ್ತ ಇತ್ತ ನೋಡಿ ರೊಪ್ಪದಿಂದ ಚಂಗನೆ ನೆಗೆಯಿತು. ಬೆಳದಿಂಗಳ ಬೆಳಕಿನಲ್ಲಿ ಅದರ ಆನಂದಕ್ಕೆ ಪಾರವೇ ಇಲ್ಲ, ಕುಣಿಯಿತು, ಕುಪ್ಪಳಿಸಿತು. ತನ್ನ ಸಂಗಡಿಗರ ಬಗ್ಗೆ ಅದಕ್ಕೆ ತಿರಸ್ಕಾರ ಮೂಡಿತು. " ಆಹಾ ನಾನೆಂತ ಸ್ವರ್ಗೀಯ ಸೌಂದರ್ಯವನ್ನು ಅನುಭವಿಸುತ್ತಿದ್ದೇನೆ. ಆನಂದದ ಅಮೃತಪಾನ ಮಾಡುತ್ತಿದ್ದೇನೆ. ಈಗ ನನ್ನ ಸಂಗಡಿಗರಾದರೊ ಬೇಲಿಯ ಮುಳ್ಳು ರೊಪ್ಪದ ಕತ್ತಲೆಯಲ್ಲಿ ಹೊಲಸು ವಾಸನೆಯ ಮಧ್ಯೆ ಮೆಲಕು ಹಾಕುತ್ತಿವೆ. ಅವುಗಳ ಹಣೆಯಲ್ಲಿ ಎಲ್ಲಿ ಇಂಥ ಭಾಗ್ಯ ಬರೆದಿರಬೇಕು" ಎಂದುಕೊಂಡು ಮನಬಂದಂತೆ ಕುಣಿದು ನೆಗೆದು ಅರಚುತ್ತಾ ಆನಂದದಲ್ಲಿ ಮೈಮರೆಯಿತು. ತಾನು ಕುಣಿಯುತ್ತಾ ಕುಣಿಯುತ್ತಾ ರೊಪ್ಪದಿಂದ ಬಹುದೂರ ಕಾಡಿನ ಅಂಚಿಗೆ ಬಂದಿರುವೆನೆಂಬ ಅರಿವೇ ಅದಕ್ಕಾಗಲಿಲ್ಲ. ಅದು ತನ್ನ ಸ್ವಾತಂತ್ರ್ಯ ಮನೋಭಾವದ ಸಾಹಸ ಪ್ರವೃತ್ತಿಯ ಸೌಂದರ್ಯೋಪಾಸನೆಯಲ್ಲಿ ತಲ್ಲೀನವಾಗಿತ್ತು. ಹತ್ತಿರದ ಪೊದೆಯಲ್ಲಿ ಹುಲಿಯೊಂದು ಅವಿತು ಕುರಿಯ ಸ್ವಾತಂತ್ರ್ಯ ಮನೋಭಾವದ ಸ್ವಚ್ಛಂದ ಲೀಲೆಯನ್ನು ಕಣ್ಣಲ್ಲಿ ಕಣ್ಣಿಟ್ಟು ತೀವ್ರಾಸಕ್ತಿಯಿಂದ ಸರ್ವ ಸಿದ್ಧವಾಗಿ ಸಮಯಕ್ಕಾಗಿ ಕಾದು ಸಜ್ಜಾಗಿತ್ತು. ಬೆಳ್ದಿಂಗಳ ಬೆಳಕಿನಲ್ಲಿ ಮಿಂದು ಅಪೂರ್ವ ಸೌಂದರ್ಯ ಶೋಭೆ ಪಡೆದ ಕಾಡು ಕುರಿಯ ಸುಪ್ತ ಸೌಂದರ್ಯಾಸ್ವಾದನೆಯ ಭಾವಗಳನ್ನು ಮಿಡಿಯಿತು. ಮರಗುಟ್ಟುವ ಕಾಡಿನ ಶ್ರುತಿಗೆ ಹೆಜ್ಜೆ ಹಾಕುತ್ತಾ ಹಾರಿ ಹಾರಿ ನೆಗೆನೆಗೆದು ಮೂರನೆ ತಾಳ ಮುಟ್ಟಿ ತನ್ನನ್ನ ತಾನು ಮರೆತು ಪೊದೆಯ ಬಳಿ ನೆಗೆಯಿತು ಕುರಿ. ಅಲ್ಲೇ ಅವಿತಿದ್ದ ಹುಲಿ ಮೇಲೆ ಹಾರಿ ಒಂದೇ ಏಟಿಗೆ ಅದನ್ನು ಮುಗಿಸಿತು. ಎಳೆಯ ಕುರಿಯ ಸ್ವಾತಂತ್ರ್ಯ ಪ್ರವೃತ್ತಿ ರಕ್ತವಾಗಿ ಹರಿಯಿತು. ಅದರ ದೇಹ ತುಂಡು ತುಂಡಾಗಿ ಚೆಲ್ಲಾಡಿತು.

(ಕೃಪೆ : ಶಿವಕುಮಾರ ವಾಣಿ ಸಂ. ಪ್ರೊ. ಕೆ.ಜಿ. ನಾಗರಾಜಪ್ಪ)

ಓಂ



## ಶ್ರೀ ಸಿದ್ಧಲಿಂಗೇಶ್ವರ ವಚನ

ಪರುಷ ಸೋಂಕಿಯೂ ಪಾಷಾಣ ಶುದ್ಧವಾಗದಿದ್ದರೆ
ಆ ಪರುಷದಗೊಡವೆ ಏತಕಯ್ಯಾ?
ಅಗ್ನಿ ಸೋಂಕಿಯೂ ಕಾಷ್ಠದ ಗುಣವಳಿಯದಿದ್ದರೆ
ಆ ಅಗ್ನಿಯಗೊಡವೆ ಏತಕಯ್ಯಾ?
ಗರುಡನಿದ್ದೂ ಸರ್ಪದ ಭಯ ಹಿಂಗದಿದ್ದರೆ
ಆ ಗರುಡನಗೊಡವೆ ಏತಕಯ್ಯಾ?
ವಜ್ರಾಂಗಿಯ ತೊಟ್ಟಿರ್ದೂ ಬಾಣದ ಭಯ ಹಿಂಗದಿದ್ದರೆ
ಆ ವಜ್ರಾಂಗಿಯಗೊಡವೆ ಏತಕಯ್ಯಾ?
ಆನೆಯನೇರಿಯೂ ಶ್ವಾನನ ಭಯ ಹಿಂಗದಿದ್ದರೆ
ಆ ಆನೆಯಗೊಡವೆ ಏತಕಯ್ಯಾ?
ಜ್ಯೋತಿಯಿದ್ದೂ ಕತ್ತಲೆಹರಿಯದಿದ್ದರೆ
ಆ ಜ್ಯೋತಿಯ ಗೊಡವೆ ಏತಕಯ್ಯಾ?
ಅಂಗದ ಮೇಲೆ ಚಿದ್ಘನ ಲಿಂಗವ ಧರಿಸಿದ್ದು
ತನುಮನದ ಅವಗುಣ ಹಿಂಗದಿದ್ದರೆ
ಆ ಲಿಂಗದಗೊಡವೆ ಏತಕಯ್ಯಾ?
ನೀವು ಸೋಂಕಿಯೂ ಭವ ಹಿಂಗದಿದ್ದರೆ ನಿಮಗೆ ಕುಂದಯ್ಯಾ?
ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ!

ಲಿಂಗವನ್ನು ಧರಿಸಿಕೊಂಡಾಗಲೂ ಅಂಗಗುಣಗಳು ಅಳಿಯದೇ ಹೋದರೆ ಅಂಥ ಲಿಂಗಧಾರಣದ ಪ್ರಯೋಜನ ವೇನು? ಎಂಬುದನ್ನು ಸದೃಷ್ಟಾಂತಪೂರ್ವಕ ನಿರೂಪಿಸಲಾಗಿದೆ

(ಕೃಪೆ : ಷಟ್‌ಸ್ಥಲ ಜ್ಞಾನ ಸಾರಾಮೃತ - ಶ್ರೀ.ತೋ.ಸಿ.ಕೈಂ. ಸೇ. ಸಂಘ, ಎಡೆಯೂರು-ಗದಗ)

## ಮನವಿ

"ಸಿದ್ಧಗಂಗಾ" ಪತ್ರಿಕೆ ಕಳೆದ ೩೪ ವರ್ಷಗಳಿಂದ ಶ್ರೀ ಮಠದ ಹಳೆಯ ವಿದ್ಯಾರ್ಥಿಗಳ ಸಂಘದ ವತಿಯಿಂದ ಪ್ರಕಟವಾಗುತ್ತಿದೆ. ಸಾಹಿತ್ಯ, ಕಲೆ, ಧರ್ಮ, ಸಂಸ್ಕೃತಿ, ಕೃಷಿ, ವಾಣಿಜ್ಯ ಹೀಗೆ ಹಲವಾರು ವಿಷಯಗಳನ್ನು ಕುರಿತು ವೈವಿಧ್ಯಮಯ ಲೇಖನಗಳನ್ನು ಪ್ರಕಟಿಸುವುದರ ಮೂಲಕ ಜನರಲ್ಲಿ ಜಾಗೃತಿ ಮೂಡಿಸುತ್ತಾ ಬಂದಿದೆ. ನಾಡಿನ ಪ್ರಸಿದ್ಧ ಲೇಖಕರು ತಮ್ಮ ಮೌಲಿಕ ಲೇಖನಗಳನ್ನು ನೀಡುವುದರ ಮೂಲಕ ಸಹಕಾರ ನೀಡುತ್ತಾ ಬಂದಿದ್ದಾರೆ. ೧೯೯೮ರ ಜನವರಿಯಿಂದ ಆಕಾರ, ವಿನ್ಯಾಸ ಮೊದಲಾದ ಬದಲಾವಣೆ ಗಳೊಂದಿಗೆ ಆಫ್‌ಸೆಟ್ ಮುದ್ರಣಾಲಯದಲ್ಲಿ ಆಕರ್ಷಕವಾಗಿ ಮುದ್ರಣವಾಗುತ್ತಿದ್ದು, ಸಹೃದಯರ ಮೆಚ್ಚುಗೆಗೆ ಪಾತ್ರವಾಗಿದೆ. ತಿಂಗಳಿಂದ ತಿಂಗಳಿಗೆ ಪತ್ರಿಕೆಯ ಪ್ರಸಾರ ಹೆಚ್ಚಾಗುತ್ತಿದೆ ಎಂದು ಈ ಸಂದರ್ಭದಲ್ಲಿ ತಿಳಿಸಲು ಅಭಿಮಾನವೆನಿಸುತ್ತದೆ.

ವರ್ಷದಿಂದ ವರ್ಷಕ್ಕೆ ಮುದ್ರಣದ ವೆಚ್ಚ ಹೆಚ್ಚಾಗುತ್ತಿದ್ದು ಪತ್ರಿಕೆಯನ್ನು ಪ್ರಕಟಿಸಲು ಜಾಹಿರಾತು ಅತಿಮುಖ್ಯವಾಗಿದೆ. ಅನೇಕ ವರ್ಷಗಳಿಂದ ಅಭಿಮಾನಿಗಳು ಜಾಹಿರಾತು ನೀಡುವುದರ ಮೂಲಕ ಪತ್ರಿಕೆಯ ಬೆಳವಣಿಗೆಗೆ ಸ್ಪಂದಿಸುತ್ತಿರುವುದು ಸಂತೋಷದ ಸಂಗತಿ. ತಾವು ಇನ್ನು ಮುಂದೆಯೂ ಜಾಹಿರಾತು ನೀಡುವುದರ ಮೂಲಕ ಪತ್ರಿಕೆ ಮತ್ತಷ್ಟು ಆಕರ್ಷಕವಾಗಿ ಮೂಡಿಬರಲು ಸಹಕರಿಸಬೇಕಾಗಿ ಕೋರುತ್ತೇವೆ.

ಒಂದು ಸಂಚಿಕೆಗೆ ತಗಲುವ ಮುದ್ರಣ ವೆಚ್ಚವನ್ನು ಭರಿಸಿದರೆ ಆ ತಿಂಗಳ ಸಂಚಿಕೆಯನ್ನು ದಾನಿಗಳ ಭಾವಚಿತ್ರ ಸಹಿತ ಪರಿಚಯದೊಂದಿಗೆ ಹೊರತರಲಾಗುವುದು. ಸಹೃದಯರು, ಮಠದ ಅಭಿಮಾನಿಗಳು ಈ ಸದಾವಕಾಶವನ್ನು ಬಳಸಿಕೊಳ್ಳಬೇಕೆಂದು ವಿನಂತಿಸುತ್ತೇವೆ.

ಹೆಚ್. ಬಿ. ಗಂಗಾಧರಯ್ಯ
ಪ್ರಕಾಶಕರು
**ಸಿದ್ಧಗಂಗಾ ಮಾಸಿಕ**







# ಸೇವೆ ಮತ್ತು ಅಧಿಕಾರ : ಒಂದು ಚಿಂತನೆ

-- ಡಾ. ಡಿ. ಎಂ. ನಂಜುಂಡಪ್ಪ
ಯೋಜನಾ ಆಯೋಗದ ಉಪಾಧ್ಯಕ್ಷರು,
ಕರ್ನಾಟಕ ಸರ್ಕಾರ

*"Sir Hug Daly" ಚಿನ್ನದ ಪದಕ, 'ಇಂದಿರಾಗಾಂಧೀ ರಾಷ್ಟ್ರೀಯ ಭಾವೈಕ್ಯತಾ' ಪ್ರಶಸ್ತಿಯನ್ನು ಪಡೆದಿರುವ ಅಂತಾರಾಷ್ಟ್ರೀಯ ಖ್ಯಾತಿಯ ಅರ್ಥಶಾಸ್ತ್ರಜ್ಞ, ಶಿಕ್ಷಣ ತಜ್ಞ, ದಕ್ಷ ಆಡಳಿತಗಾರ ಡಾ. ಡಿ. ಎಂ. ನಂಜುಂಡಪ್ಪನವರು ಪ್ರಸ್ತುತ ರಾಜ್ಯಯೋಜನಾ ಆಯೋಗದ ಉಪಾಧ್ಯಕ್ಷರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಬಹುಮುಖ ಪ್ರತಿಭೆಯ ಡಾ. ನಂಜುಂಡಪ್ಪನವರು ರಾಷ್ಟ್ರೀಯ ಹಾಗೂ ಅಂತಾರಾಷ್ಟ್ರೀಯ ಮಟ್ಟದ ವಿಚಾರ ಗೋಷ್ಠಿಗಳಲ್ಲಿ ತಮ್ಮ ವಿದ್ವತ್ ಪೂರ್ಣವಾದ ಪ್ರೌಢಪ್ರಬಂಧಗಳನ್ನು ಮಂಡಿಸಿದ್ದಾರೆ. ೨೦ಕ್ಕೂ ಹೆಚ್ಚು ಮೌಲಿಕ ಗ್ರಂಥಗಳನ್ನು, ನೂರಕ್ಕು ಹೆಚ್ಚು ಸಂಶೋಧನಾ ಲೇಖನಗಳನ್ನು ಪ್ರಕಟಿಸಿದ್ದಾರಲ್ಲದೆ, ಮುನ್ನೂರಕ್ಕೂ ಹೆಚ್ಚು ಆರ್ಥಿಕ ನೀತಿ ಬಗೆಗಿನ ವರದಿಗಳನ್ನು ಸಿದ್ಧಪಡಿಸಿಕೊಟ್ಟಿದ್ದಾರೆ. ಧಾರವಾಡ ಮತ್ತು ಬೆಂಗಳೂರು ವಿಶ್ವವಿದ್ಯಾನಿಲಯದಲ್ಲಿ ಉಪಕುಲಪತಿಗಳಾಗಿ ಸೇವೆಸಲ್ಲಿಸಿದ್ದಾರಲ್ಲದೆ, ಹಲವಾರು ಪ್ರತಿಷ್ಠಿತ ಹುದ್ದೆಗಳಲ್ಲಿ ಕಾರ್ಯ ನಿರ್ವಹಿಸಿ ಆ ಸ್ಥಾನಗಳಿಗೆ ಘನತೆ ಗೌರವವನ್ನು ತಂದು ಕೊಟ್ಟಿದ್ದಾರೆ. ಪ್ರಸ್ತುತ ಲೇಖನದಲ್ಲಿ ಡಾ. ಡಿ. ಎಂ. ನಂಜುಂಡಪ್ಪನವರು ಅಧಿಕಾರ ಮತ್ತು ಸೇವೆಯ ಮೌಲ್ಯವನ್ನು ಕುರಿತು ಚಿಂತನೆ ಮಾಡಿದ್ದಾರೆ.*

ಭಾರತದ ಎರಡು ದೊಡ್ಡ ರಾಜ್ಯಗಳಾದ ಕರ್ನಾಟಕ ಮತ್ತು ಆಂಧ್ರ ಪ್ರದೇಶಗಳಲ್ಲಿ ಚುನಾವಣಾ ಸಮಯ. ಅಭ್ಯರ್ಥಿಗಳು ಹಾಗೂ ಜನರು ಫಲಿತಾಂಶಕ್ಕಾಗಿ ಕಾಯುತ್ತಿದ್ದಾರೆ. ಕೆಲವು ಅಭ್ಯರ್ಥಿಗಳಿಗೆ ಸೋಲಿನ ಭಯ. ಜನರಿಗೆ ಹೊಸದಾಗಿ ಚುನಾಯಿತರಾಗುವರು ಮೊದಲಿದ್ದವರಿಗಿಂತ ಉತ್ತಮ ರಾದವರೆ? ಅವರು ಒಳ್ಳೆಯವರು, ದಕ್ಷ ಮತ್ತು ನ್ಯಾಯ ಸರ್ಕಾರವನ್ನು ನಡೆಸಬಲ್ಲರೆ? ಅವರು ಬಡತನ ಮತ್ತು ನಿರುದ್ಯೋಗವನ್ನು ಹೋಗಲಾಡಿಸಲು ಶೀಘ್ರಗತಿ ಅಭಿವೃದ್ಧಿಯನ್ನು ರಾಜ್ಯದಲ್ಲಿ ತಂದು, ಜೀವನದ ಉನ್ನತ ಧ್ಯೇಯಗಳನ್ನು ಬೆಳೆಸಿಕೊಳ್ಳುವರೇ? ಈ ಪ್ರಶ್ನೆಗಳನ್ನು ಕಾಡುತ್ತಿವೆ. ಜಯ ಖಚಿತ ಎನಿಸಿರುವ ಅಭ್ಯರ್ಥಿಗಳಿಗೆ ಅಧಿಕಾರ ಹಣಗಳಿಸುವ ಸಾಧ್ಯತೆ, ತಮ್ಮ ಪ್ರಾಪಂಚಿಕ ಸಮೃದ್ಧಿಯ ಕನಸು. ಕೆಲವರು ಶಾಸಕನಾಗಿ; ಮಂತ್ರಿಯಾಗಿ ಸಿಗುವ ಅವಕಾಶವನ್ನು ಜನರ ಕಲ್ಯಾಣಕ್ಕಾಗಿ ಉಪಯೋಗಿಸಬಹುದಾದ ಅಸ್ತ್ರ ಎಂಬ ಭಾವನೆ. ಇದೇನೆ ಇರಲಿ; ಪ್ರಸ್ತುತ ಮತ್ತು ನಿರ್ಣಾಯಕ ಪ್ರಶ್ನೆ ಇಂತಹ ಸಂದರ್ಭದಲ್ಲಿ ಯಾವುದೆಂದರೆ; ಹೊಸ ಅವಕಾಶವನ್ನು ಜನರ, ರಾಜ್ಯದ ಮತ್ತು ತಾಯ್ನಾಡಿನ ಸೇವೆಗಾಗಿ ಮುಡಿಪುಡುವರೆ? ಪ್ರಾಪಂಚಿಕ ಸುಖಕ್ಕೆ, ಹಣ ಸಂಪಾದನೆಗೆ ಪ್ರಾಮುಖ್ಯತೆ ಕೊಟ್ಟು ಜನರು ಪ್ರಜಾಪ್ರಭುತ್ವದಲ್ಲಿ ಯಾವ ಉನ್ನತ ಉದ್ದೇಶಗಳಿಗಾಗಿ ತಮ್ಮನ್ನು ಚುನಾಯಿಸಿದ್ದಾರೆ ಎಂಬುದನ್ನು ಮರೆಯುತ್ತಿರುವುದನ್ನು ಕಾಣುತ್ತಿದ್ದೇವೆ. ಆದ್ದರಿಂದ ಒಂದು ಮುಖ್ಯ ಪ್ರಶ್ನೆಯನ್ನು ನಾವು ಕೇಳಬಹುದು. ಅದೇನೆಂದರೆ, ಚುನಾಯಿತ ಪ್ರತಿನಿಧಿಗಳಲ್ಲಿ ಎಷ್ಟು ಅಭ್ಯರ್ಥಿಗಳಿಗೆ ಸೇವೆಯ ನಿಜವಾದ ಅರ್ಥ ಗೊತ್ತಿದೆ? ಅದನ್ನು ತಿಳಿದುಕೊಂಡು ಕಾರ್ಯನಿರ್ವಹಿಸಬಲ್ಲರು? ನಾನು ಈ ಸೇವೆಯ ಪರಿಪಕ್ವವಾದ ಅರ್ಥವನ್ನು ಈ ಲೇಖನದಲ್ಲಿ ಪ್ರಸ್ತಾಪಿಸಿದ್ದೇನೆ.

### ಬಡತನ, ರಾಷ್ಟ್ರೀಯ ಸಂಪತ್ತು ಮತ್ತು ಸೇವೆಯ ಮೌಲ್ಯ

ಭಾರತದಲ್ಲಿ ಅಪಾರ ಪ್ರಕೃತಿದತ್ತವಾಗಿ ಬಂದ ಸಂಪತ್ತು, ಪುರಾತನ ಕಾಲದಿಂದ ಬಂದಿರುವ ಸಾಂಸ್ಕೃತಿಕ ಹಿನ್ನೆಲೆ ಮತ್ತು ದೊಡ್ಡ ಜನಸಂಖ್ಯೆಯಲ್ಲಿ ವಿರಳವಾಗಿ ದೊರೆಯುವ ಕೌಶಲ್ಯವಿದೆ. ಸ್ವಾತಂತ್ರ ಬಂದ ನಂತರ ಬಡತನ, ಅನಕ್ಷರತೆ, ನಿರುದ್ಯೋಗ ನಿವಾರಣೆ ಹಾಗೂ ದಿಕ್ಕಿಲ್ಲದ ಕೋಟ್ಯಾಂತರ ಜನರ ಕಲ್ಯಾಣಕ್ಕಾಗಿ ಪಂಚವಾರ್ಷಿಕ ಯೋಜನೆಗಳ ಮುಖಾಂತರ ಯೋಜಿತ ಅಭಿವೃದ್ಧಿ ಕಾರ್ಯವನ್ನು ರಾಷ್ಟ್ರ ಕೈಗೊಂಡಿದೆ. ಹಿಂದೆ ನಮ್ಮ ರಾಷ್ಟ್ರ ವಸಾಹತು ರಾಷ್ಟ್ರವಾದದ್ದರಿಂದ ಮತ್ತು

ಆಂಗ್ಲರ ಆಳ್ವಿಕೆಯಲ್ಲಿ ನಡೆದು ಬಂದ 'ಒಡೆಯ - ಆಳು' ಇವರ ಅಮಾನುಷ ಸಂಬಂಧದಿಂದ ಇಷ್ಟೊಂದು ಸಮಸ್ಯೆಗಳನ್ನು ಎದುರಿಸಬೇಕಾಯಿತು. ನಮ್ಮ ರಾಷ್ಟ್ರದ ಸಮಸ್ಯೆಯನ್ನು ಅರಿತುಕೊಳ್ಳುವುದಕ್ಕೆ ಬಹಳ ಕಾಲ ಬೇಕಾಯಿತೆ? ನೂರಾರು ವರ್ಷಕ್ಕೂ ಹಿಂದೆ ಶ್ರೀ ಸ್ವಾಮಿ ವಿವೇಕಾನಂದರು ನಮ್ಮದೇಶ ಎದುರಿಸುತ್ತಿರುವ ಸಮಸ್ಯೆಗಳು ಬಡತನ, ಅನಕ್ಷರತೆ ಮತ್ತು ಶೋಷಣೆ ಎಂಬುದಾಗಿ ಸ್ಪಷ್ಟವಾಗಿ ಹೇಳಿದ್ದರು. ಸ್ವಾಮೀಜಿಯವರು ತಮ್ಮರಾಷ್ಟ್ರದ ಸ್ಥಿತಿಯನ್ನು ದುಃಖಪೂರಿತವಾಗಿ ವಿವರಿಸಿ ಹೇಳಿದ ಮಾತು. "ಉಪನಿಷತ್ತುಗಳ ಹಿರಿಮೆ ಇದ್ದಾಗ್ಯೂ, ಬೇರೆ ಜನಗಳಿಗೆ ಹೋಲಿಸಿದರೆ ನಮ್ಮದೇಶದಲ್ಲಿ ಹೆಮ್ಮೆ ಪಡುವಂತಹ ಸಾಧು-ಸಂತ ಪರಂಪರೆ ಇದ್ದಾಗ್ಯೂ, ಭಾರತೀಯರು ನಿಶ್ಯಕ್ತರು, ಬಹಳ ನಿಶ್ಯಕ್ತರು" ಎಂದು ಒತ್ತಿ ಹೇಳಿದ್ದರು. ಮೊದಲನೆಯದಾಗಿ, "ನಮ್ಮ ದೈಹಿಕ ಆಸಕ್ತಿ ನಿಜವಾಗಿಯೂ ನಮ್ಮದೀನ ದಲಿತರ ನೋವಿಗೆ ಅತಿ ಮುಖ್ಯ ಕಾರಣ. ನಾವು ಸೋಮಾರಿಗಳು; ಕೆಲಸ ಮಾಡಲಾಗದವರು, ನಾವು ಕೂಡಿ ಕೆಲಸ ಮಾಡದವರು, ಪರಸ್ಪರ ಪ್ರೀತಿ ವಿಶ್ವಾಸ ಇಲ್ಲದವರು, ಬಹಳ ಸ್ವಾರ್ಥಿಗಳು, ನಮ್ಮಲ್ಲಿ ಮೂವರು ಒಬ್ಬರನ್ನೊಬ್ಬರು ದೂಷಿಸದೆ ಕೂಡಲಾರರು ಅವರು ಒಬ್ಬರನೊಬ್ಬರು ಹೊಟ್ಟೆ ಕಿಚ್ಚಿನಿಂದ ಹೀಯಾಳಿಸದಿರರು."

ಬಡತನ ನಿರ್ಮೂಲನವನ್ನು ಗುರಿಯಾಗಿಟ್ಟುಕೊಂಡು ನಮ್ಮದೇಶದಲ್ಲಿ ವೈಜ್ಞಾನಿಕವಾಗಿ ಯೋಜನೆಗಳ ಮುಖೇನ ನಮ್ಮ ಪ್ರಕೃತಿ ಸಂಪತ್ತನ್ನು ಹಾಗೂ ಮಾನವ ಸಂಪತ್ತನ್ನು, ಎಲ್ಲರ ಕಲ್ಯಾಣಕ್ಕಾಗಿ ಅಭಿವೃದ್ಧಿ ಪಡಿಸಲು ಪ್ರಯತ್ನ ನಡೆದಿದೆ. ಆದರೆ ಈ ಕಾರ್ಯವನ್ನು ಮಾಡುವಾಗ ಕಾರ್ಯದಲ್ಲಿ ವಸ್ತು ಅಭಿವೃದ್ಧಿ ಭರದಿಂದ ನಡೆದಿದ್ದರೂ ಅದರ ವೇಗ, ಹೆಚ್ಚಿನ ಉತ್ಪಾದನೆಯನ್ನು ತೋರಿಸುವ ಶಕ್ತಿ, ಅದರ ಸಮಾನ ಹಂಚಿಕೆ ಮತ್ತು ಅಭಿವೃದ್ಧಿ ಪಥದಲ್ಲಿ ಜನಸಾಮಾನ್ಯರ ಪಾತ್ರ ಇವೆಲ್ಲವೂ ಕಾರ್ಯಕರ್ತ ವ್ಯಕ್ತಿಗಳು ಈ ಬೃಹತ್ ಜವಾಬ್ದಾರಿಯನ್ನು ನಿರ್ವಹಿಸುವಲ್ಲಿ ತಮ್ಮಕಾರ್ಯವನ್ನು ತೃಪ್ತಿಕರವಾಗಿ ಮಾಡದೆ ಹೋದುದರಿಂದ ನಾವು ಕಾಣಬಹುದಾಗಿದ್ದ ಯಶಸ್ಸಿನ ಮಟ್ಟವನ್ನು ಮುಟ್ಟಿಲ್ಲ. ಎಲ್ಲಿ ನೋಡಿದರೂ, ತಮ್ಮ ಕೆಲಸಕ್ಕೆ ಒಂದು ರೀತಿಯ ತಿರಸ್ಕಾರ ಭಾವನೆ, ಬಡವರನ್ನು ದೂರ ಮಾಡುವುದು, ಅವ್ಯಾಹತವಾಗಿ ಹೆಚ್ಚುತ್ತಿರುವ ಲಂಚಗುಳಿತನ, ಕಡಿಮೆ ಉತ್ಪಾದಕತೆ, ಹೆಚ್ಚುತ್ತಿರುವ ನಿರುದ್ಯೋಗ, ಅತೃಪ್ತಿಕರ ಸ್ವಚ್ಛತೆ ಮತ್ತು ನಮ್ಮ ದೇಶದ ಸಮಸ್ಯೆಗಳಿಗೆ ತೃಪ್ತಿಕರವಾಗಿ ಉತ್ತರಗಳನ್ನು ಸಮರ್ಪಣಾ ಭಾವದಿಂದ ನೀಡದಿರುವುದು ಮುಖ್ಯ ಕಾರಣಗಳಾಗಿ ಕಾಣುತ್ತಿದೆ.

### ಅಧಿಕಾರ

ರಾಜಕಾರಣಿಗಳು ಮತ್ತು ನೌಕರರು ಅಧಿಕಾರ ದಾಹದಿಂದ ಹುಚ್ಚೆದ್ದಿದ್ದಾರೆ. ಅವರು ಸೇವೆಯ ಪ್ರಮುಖ ಸೂತ್ರವನ್ನು ಧಿಕ್ಕರಿಸಿದ್ದಾರೆ. ಅಧಿಕಾರ ಇರುವುದು ಸೇವೆ ಮಾಡುವುದಕ್ಕಾಗಿ, ಆಳುವುದಕ್ಕಲ್ಲ. ಗ್ರಾಮಗಳ ಮತ್ತು ಬಡ ಜನರ ಏಳ್ಗೆಗಾಗಿ ತೀರ್ಮಾನಗಳನ್ನು ಕೈಗೊಳ್ಳುವಂತೆ ಮನಸ್ಸನ್ನು ತಿದ್ದುವುದು, ಆ ಮುಖೇನ ನಗರ-ಗ್ರಾಮೀಣ ಪ್ರದೇಶಗಳಿಗೆ ಇರುವ ಅಂತರ ಮತ್ತು ಬಡವ-ಶ್ರೀಮಂತರ ಮಧ್ಯೆ ಬೆಳೆದಿರುವ ಅಸಮಾನತೆ ಇವುಗಳು ಹೆಚ್ಚಾಗದಂತೆ ನೋಡಿಕೊಳ್ಳಲು ಅಧಿಕಾರ ಇದೆಯೇ ವಿನಾ ಅಸಮಾಧಾನವನ್ನು ಗರಿಷ್ಠ ಮಟ್ಟಕ್ಕೆ ಒಯ್ಯುವುದಕ್ಕಲ್ಲ. ಒಟ್ಟಾರೆ ಜನಗಳ ಕಲ್ಯಾಣವನ್ನು ಹೆಚ್ಚಿಸುವುದಕ್ಕೆ ಅಧಿಕಾರ ಇದೆಯೇ ವಿನಾ ಸ್ವಾರ್ಥಕ್ಕೆ ಬಲಿಯಾಗಿ ತನ್ನ ಸ್ವಂತ ಆಸ್ತಿ ಅಭಿವೃದ್ಧಿಗಲ್ಲ. ತನಗೇ ಅಲ್ಲದಿದ್ದರೂ ತನ್ನ ಸಂಬಂಧಿ ಬಳಗದವರಿಗೆ ಆಸ್ತಿ ಮಾಡುವಂತೆ ನೆರವಾಗುವುದಲ್ಲ. ಅಧಿಕಾರ ಇರುವುದು ಮೌಲ್ಯ ರಹಿತ ಸಮಾಜವನ್ನು ಸೃಷ್ಟಿಸುವುದಕ್ಕಂತೂ ಅಲ್ಲ. ಮೌಲ್ಯಭರಿತ, ಚೇತನಕಾರಿ ಮತ್ತು ಹೆಚ್ಚು ದುಂದುಭಿಸುವ ರಾಷ್ಟ್ರ ಮತ್ತು ಜನಗಳನ್ನು ಬೆಳೆಸುವುದ್ಧಕಾಗಿ ಇರುವುದು ಅಧಿಕಾರ.

ಅಯ್ಯೋ! ಇದರ ತದ್ವಿರುದ್ಧವೇ ಎಲ್ಲ ನಡೆಯುತ್ತಿವೆಯಲ್ಲ; ಎಲ್ಲೆಲ್ಲೂ ಅನೈತಿಕತೆಯು ತುಂಬಿದೆ; ಲಂಚಗುಳಿತನ ತಾಂಡವಾಡುತ್ತಿದೆ; ನೈತಿಕ ಮೌಲ್ಯಗಳು ಸಂಪೂರ್ಣವಾಗಿ ನಶಿಸಿ ಹೋಗಿವೆ; ದೇಶದ ಮುಂದಾಳುಗಳು ಅನ್ನಿಸಿಕೊಂಡಿರುವವರು ಜನರ ಸೇವಕರೆಂದು ನಟಿಸುತ್ತಿದ್ದು ಕೇವಲ ಬಾಯಿ ಮಾತಿನಲ್ಲಿಯೇ ಸೇವೆ ನಡೆಸುವವರಾಗಿದ್ದಾರೆ. ನೈತಿಕತೆ, ಪ್ರಾಮಾಣಿಕತೆ ಕಣ್ಮರೆಯಾಗಿರುವುದು ಮತ್ತು ಆತ್ಮಸಾಕ್ಷಿಯಾಗಿ ಸಮರ್ಪಣಾ ಭಾವನೆಯಿಂದ ಕೆಲಸ ಮಾಡದೇ ಇರುವುದು ನಮ್ಮದೇಶದ ಪ್ರಸಕ್ತ ಪರಿಸ್ಥಿತಿಗೆ ಏಕೈಕ ಕಾರಣವೆನ್ನಬಹುದು.

### ಆತ್ಮ ಸಾಕ್ಷಾತ್ಕಾರ

ಸೇವೆ ಹಣಕ್ಕೆ ಪ್ರತಿಯಾಗಿ ಇರಬಹುದು; ಇಲ್ಲವೆ ಆತ್ಮ ಸಾಕ್ಷಾತ್ಕಾರಕ್ಕೆ ಇರಬಹುದು. ಮನೆತನದ ಜವಾಬ್ದಾರಿ ಇರುವುದರಿಂದ ಯಾರೂ ತಮ್ಮಸೇವೆಗೆ ಹಣವನ್ನು ಅಥವಾ ಸಂಬಳ / ಕೂಲಿಯನ್ನು ಪಡೆಯುವುದರಲ್ಲಿ ತಪ್ಪೇನೂ ಇಲ್ಲ. ಆದರೆ ಹಾಗೆ ಮಾಡುವಾಗ ಸೇವೆಯನ್ನು ಪ್ರೀತಿಯೊಂದಿಗೆ





ಗುರುತುಪಡಿಸಿ, ಜನರ ಆಶೋತ್ತರಗಳಿಗೆ ಸ್ಪಂದಿಸಿ, ತನ್ನ ಆಶೆಯನ್ನು ಹತ್ತಿಕ್ಕಿ, ಯಾವ ವಿಧವಾದ ಪ್ರತಿಫಲಕ್ಕೂ ಹಾತೊರೆಯದಂತೆ ಮಾಡಿದಲ್ಲಿ ಅದಕ್ಕೆ ಮಾನ್ಯತೆ ಉಂಟು. ಈಗಲೂ ಅನೇಕರು, ಅವರ ಸಂಖ್ಯೆ ಕಡಿಮೆ ಇದ್ದಾಗ್ಯೂ. ತಮ್ಮ ಸೇವೆಯನ್ನು ಸಂಸಾರದ ಖರ್ಚನ್ನು ನಿಭಾಯಿಸಲು ಮತ್ತು ರಾಷ್ಟ್ರಕ್ಕೆ ನೀಡಬೇಕಾದ ಕರ್ತವ್ಯವನ್ನು ಅರಿತು ಮಾಡುವವರಿದ್ದಾರೆ. ಆದರೆ ಇದು ಮೂರ್ಛೆ ರೋಗದಂತೆ - ಯಾವಾಗಲೋ ಒಮ್ಮೊಮ್ಮೆ ಕಾಣಿಸಿಕೊಂಡು ನಿಂತು ಹೋಗಬಾರದು. ಅದು ಪ್ರತಿದಿನ ಅವಚ್ಛಿನ್ನವಾಗಿ ನಡೆಯಬೇಕು. ಒಂದು ರೀತಿಯಲ್ಲಿ ಆಂತರಿಕವಾಗಿ ತನ್ನಷ್ಟಕ್ಕೆ ತಾನೇ ಉದ್ಭವಿಸುವ ಸೇವೆಯ ಆಸೆ ಮತ್ತು ತಮ್ಮನ್ನು ತಾವೇ ಸಮರ್ಪಣೆ ಮಾಡಿಕೊಂಡಿರುವಂತೆ ಇರಬೇಕು. ಈ ರೀತಿಯಾದಲ್ಲಿ ಮಾತ್ರ ಸೇವೆಯು ಬಾಳಿನಲ್ಲಿ ದಿನಚರಿಯ ಒಂದು ಮಾರ್ಗವಾಗುತ್ತದೆ. ಒಮ್ಮೆಹೀಗಾದಲ್ಲಿ, ಆದರ ಮಹತ್ವ ಮತ್ತು ಜನರ ಕಲ್ಯಾಣಕ್ಕಾಗಿ ಮಾಡಿದ ಕಾರ್ಯಕ್ಕೆ ಮೌಲ್ಯವನ್ನು ಕಟ್ಟಲಾಗುವುದಿಲ್ಲ. ಸೇವೆಯ ಹಿರಿಮೆಯನ್ನು ಸ್ವಾಮೀಜಿಯವರು ಪದೇ ಪದೇ ಒತ್ತಿಹೇಳುತ್ತಿದ್ದರು. ಅವರ ಜೀವನವು ಸೇವೆ ದಿನಚರಿಯ ಮಾರ್ಗಗಳಲ್ಲಿ ಒಂದು ಎಂಬ ಸಂದೇಶವನ್ನು ಬೀರುತ್ತದೆ. ಇದರ ಕುರುಹಿನಂತೆ ರಾಮಕೃಷ್ಣ ಮಠ ಸಲ್ಲಿಸುತ್ತಿರುವ ಸೇವೆ ಇಡೀ ವಿಶ್ವದ ಮಾನವೀಯತೆಗೆ ಕೊಟ್ಟಿರುವ ಮತ್ತು ಎಲ್ಲೆಲ್ಲೂ ಪ್ರಸರಿಸಿರುವ ಮಹಾ ಸಾಧನೆಯ ಚಿಹ್ನೆ.

### ಸ್ವಾರ್ಥರಹಿತ ಸೇವೆ

ಅನೇಕ ಸಂದರ್ಭಗಳಲ್ಲಿ ಒಂದು ದೊಡ್ಡ ಕೆಲಸವನ್ನು ಮಾಡುವಾಗ ಸಹಸ್ರಾರು ಜನರು ಅದನ್ನು ವೀಕ್ಷಿಸುತ್ತಾರೆ ಎನ್ನುವ ಕಾರಣಕ್ಕಾಗಿ ಅನೇಕರು ವೀರರಂತೆ ಮುಂದೆ ಬರುತ್ತಾರೆ. ಎಲ್ಲಿ ಜನರ ಸಮುದಾಯವು ಅದನ್ನು ಮೆಚ್ಚಿ ಹೊಗಳುತ್ತದೆ ಹಾಗೂ ಉತ್ಸಾಹವನ್ನು ತುಂಬುತ್ತದೆ. ಅಂತಹ ಸಂದರ್ಭಗಳಲ್ಲಿ ಒಬ್ಬ ಹೇಡಿಯೂ ಕೂಡ ಅತಿ ಸುಲಭವಾಗಿ ತನ್ನ ಜೀವವನ್ನು ಪಣಕ್ಕಿಡಲು ಹಿಂಜರಿಯುವುದಿಲ್ಲ. ಆದರೆ ಅಂತಹವರು ನಿಜವಾಗಿ ದೇಶದ ವೀರರು ಎನ್ನಿಸಿಕೊಳ್ಳಲಾರರು. ಸ್ವಾಮಿ ವಿವೇಕಾನಂದರು ಯಾರನ್ನು ನಿಜವಾಗಿ ವೀರ ಹಾಗೂ ಮುಂದಾಳುಗಳು ಎಂದು ಹೇಳುವ ವಿಷಯದಲ್ಲಿ ಎಂದೆಂದಿಗೂ ಮರೆಯಲಾರದಂತಹ ಮಾತನ್ನು ಹೇಳಿದ್ದಾರೆ. ಅದು ಹೀಗಿದೆ; "ಎಂತಹ ಚಿಕ್ಕ ಕೆಲಸವಾದರೂ ಹಾಗೂ ಅದರ ಕಡೆ ಯಾರೂ ಗಮನ ಕೊಡದೇ ಇದ್ದಾಗ್ಯೂ ಅಂತಹ ಚಿಕ್ಕ ಕೆಲಸವನ್ನು ಸ್ವಾರ್ಥರಹಿತವಾಗಿ ಮತ್ತು ಕರ್ತವ್ಯ ನಿಷ್ಠೆಯಿಂದ ಮಾಡುತ್ತಾರೋ ಅಂತಹವರು ಪುಣ್ಯಾತ್ಮರು. ಇಂತಹ ಕೆಲಸವನ್ನು ಸದಾ ತುಳಿಯಲ್ಪಟ್ಟ ಹಾಗೂ ಶೋಷಣೆಗೊಳಪಟ್ಟ ಕಾರ್ಮಿಕ ವರ್ಗದವರು ಭಾರತದಲ್ಲಿ ಮಾಡುತ್ತಿದ್ದಾರೆ. ಅವರಿಗೆ ನಾನು ವಂದಿಸುತ್ತೇನೆ."

ಸೇವೆಯು ಜನಸ್ತೋಮವನ್ನು ಎಚ್ಚರಿಸುವುದಲ್ಲದೆ ಅವರಿಗೆ ನೈತಿಕ ಹಾಗೂ ಬೌದ್ಧಿಕ ಕೆಲಸವನ್ನು ಮಾಡಲು ಸ್ಫೂರ್ತಿ ಕೊಡುವಂತದ್ದಾಗಿರಬೇಕು. ನಮ್ಮ ಸೇವೆಯ ಗುರಿ ದೀನ ದಲಿತರಿಗೆ, ದಿಕ್ಕಿಲ್ಲದವರಿಗೆ,ಅನಕ್ಷರಸ್ಥರಿಗೆ, ರೈತಾಪಿ ಜನರು ಮತ್ತು ಕೂಲಿಕಾರರಿಗೆ, ಇರಬೇಕು. ದಿನವೀಡಿ ಬೆವರು ಸುರಿಸಿ ದುಡಿಯುವ ಜನರನ್ನು ಪ್ರೀತಿ ವಿಶ್ವಾಸದಿಂದ ಗೆದ್ದುಕೊಳ್ಳಬೇಕು. ಇದಕ್ಕೆ ಒಬ್ಬ ವ್ಯಕ್ತಿ ತನ್ನ ಸ್ವಂತ ಶ್ರಮದಿಂದ ಈ ಕಾರ್ಯವನ್ನು ಮಾಡಬೇಕು. ಈ ಮಾತು ಎಲ್ಲಾ ಕ್ಷೇತ್ರಗಳಿಗೂ ಅನ್ವಯಿಸುತ್ತದೆ.

### ರಾಷ್ಟ್ರೀಯ ವಿಧಾನಗಳು

ರಾಷ್ಟ್ರೀಯ ವಿಧಾನಗಳು ಹಾಗೂ ರಾಷ್ಟ್ರೀಯ ಮಾದರಿಯ ಮುಖೇನ ಸೇವೆಯನ್ನು ಸಲ್ಲಿಸುವುದು ಸೂಕ್ತ. ಸೇವೆ ಮಾಡುವ ಹಂಬಲ ವ್ಯಕ್ತಿಯ ಅಂತರಂಗದಿಂದ ಉತ್ಪಾದಿಸಬೇಕು. ಪರರ ಕಲ್ಯಾಣಕ್ಕಾಗಿ ತನ್ನನ್ನು ತಾನೇ ಮರೆತು ಸ್ವಯಂ ಇಚ್ಛೆಯಿಂದ ತ್ಯಾಗದಿಂದ ಕೂಡಿದ ಸೇವೆಯಾಗಿರಬೇಕು. ಈ ಸಂದರ್ಭದಲ್ಲಿ ಶ್ರೀ ಸ್ವಾಮಿ ವಿವೇಕಾನಂದರು ಹೇಳಿದ ಅರ್ಥಗರ್ಭಿತ ಮಾತನ್ನು ನೆನಪಿಸಿಕೊಳ್ಳಿ. "ಯಾರೂ ಇತರರಿಗಾಗಿ ಬದುಕುತ್ತಾರೋ ಅಂತಹವರು ಮಾತ್ರ ಬದುಕಿದ್ದಂತೆ, ಮಿಕ್ಕವರೆಲ್ಲ ಬದುಕಿದ್ದರೂ ಸತ್ತಂತೆ"

ಸೇವೆಯನ್ನು ದಿನಚರಿಯಲ್ಲಿ ಅನುಸರಿಸಬೇಕಾದ ಒಂದು ಜೀವನದ ಮಾರ್ಗ ಎನ್ನುವುದಾದರೆ ಪ್ರಪ್ರಥಮವಾಗಿ ನಾವು ಉಪನಿಷತ್ತುಗಳಲ್ಲಿ ಹೇಳಿರುವ ಸಿದ್ಧಾಂತದ ಬಗೆ ನಂಬಿಕೆಯನ್ನು ಬೆಳೆಸಿಕೊಳ್ಳಬೇಕು ಮತ್ತು ಅದನ್ನು ಎತ್ತಿ ಹಿಡಿಯಲು ಅವಶ್ಯಕವಾಗಿ ಬೇಕಾದ ಶಕ್ತಿಯನ್ನು ಬೆಳೆಸಿಕೊಳ್ಳಬೇಕು. ಸೂಕ್ಷ್ಮವಾಗಿ "ನನ್ನಲ್ಲಿ ಆತ್ಮನು ಇದ್ದಾನೆ, ನಾನೇ ಆತ್ಮನ್" ಎಂಬುದರಲ್ಲಿ ಅಚಲವಾದ ನಂಬಿಕೆ ಅಗತ್ಯ. ಆಗ ಇಡೀ ವಿಶ್ವವನ್ನು ಚೈತನ್ಯಪೂರ್ಣವಾಗಿ ಮಾಡುವ ಶಕ್ತಿಯೆಲ್ಲಾ ಬರುತ್ತದೆ. ಹಲವಾರು ಶತಮಾನಗಳಿಂದ ನಮ್ಮಜನರಿಗೆ ತುಳಿತ-ತಿರಸ್ಕೃತ ಸಿದ್ಧಾಂತವನ್ನು ಹೇಳಿಕೊಂಡು ಬಂದಿದ್ದಾರೆ. ಅವರು ಈಗ ಹುಟ್ಟು ಸಾವನ್ನು ಅರಿಯದ ಮತ್ತು ತನ್ನಲ್ಲೇ ಅಡಕವಾಗಿರುವ 'ಆತ್ಮನ್' ಇರುವುದನ್ನು ಕೇಳಲಿ. ಜನ್ಮಸಿದ್ಧವಾದ 'ಆತ್ಮನ್'

ಎಲ್ಲರಲ್ಲಿಯೂ ಇದೆ. ಪ್ರತಿಯೊಬ್ಬರು ಸೇವೆಯನ್ನು ಜೀವನ ಪರ್ಯಂತ ನಡೆಯುವ ಮಾರ್ಗವನ್ನಾಗಿ ಅನುಸರಿಸುವುದಾದರೆ ಕೆಲವು ಷರತ್ತುಗಳಿವೆ. ಅವುಗಳಲ್ಲಿ ನಾಲ್ಕನ್ನು ಇಲ್ಲಿ ಸ್ಮರಿಸಬಹುದು. ೧. ಹೊಸ ಕಾರ್ಯದ ಸಂಸ್ಕೃತಿ ೨. ಒಳ್ಳೆಯತನದ ಶಕ್ತಿಯಲ್ಲಿ ಸಂಪೂರ್ಣ ನಂಬಿಕೆ ೩. ಹೊಟ್ಟೆಕಿಚ್ಚು ಮತ್ತು ಅನುಮಾನ ಕೂಡದು ೪. ಒಳ್ಳೆಯದನ್ನು ಮಾಡುವವರೆಲ್ಲರಿಗೂ ಹಾಗೂ ಒಳ್ಳೆಯದನ್ನು ಮಾಡುವುದಕ್ಕೆ ಪ್ರಯತ್ನಿಸುವವರೆಲ್ಲರಿಗೂ ಎಲ್ಲಾ ನೆರವು ನೀಡಬೇಕು. ಇದನ್ನೇ ಸ್ವಾಮಿ ವಿವೇಕಾನಂದರ ಮಾತಿನಲ್ಲಿ ಹೇಳುವುದಾದರೆ "ವಿಶಾಲ ಮನಸ್ಸಿನವರು ಆಗಬೇಕಾದರೆ, ಬಾಹ್ಯ ಪ್ರಪಂಚಕ್ಕೆ ಹೋಗಲು ಇಚ್ಚಿಸಿದರೆ, ಸಮನ್ವಯತೆಯನ್ನು ತರಬೇಕಾದರೆ, ವಿಶ್ವಮಾನವನಾಗಬೇಕಾದರೆ, ನಿಮ್ಮ ಜೀವನದಲ್ಲಿ ಗುರಿ, ಪ್ರೀತಿ, ಸೌಹಾರ್ದತೆ, ಪ್ರಾಮಾಣಿಕತೆ ಮತ್ತು ತಾಳ್ಮೆ ಇರಬೇಕು. ಇಷ್ಟನ್ನು ಬಿಟ್ಟು ಏನೂ ಬೇಕಾಗಿಲ್ಲ" ದೇಶದ ಸೇವೆಗಾಗಿ ಸ್ವಾಮೀಜಿಯವರು ಎಚ್ಚರಿಕೆ ಗಂಟೆಯೊಂದನ್ನು ಬಾರಿಸಿ "ಎಲ್ಲಿಯ ತನಕ ಲಕ್ಷೋಪಲಕ್ಷ ಜನರು ಹಸಿವಿನಿಂದ ಮತ್ತು ಅಜ್ಞಾನದಿಂದ ಇರುತ್ತಾರೋ ಎಲ್ಲಿಯತನಕ ಸಮಾಜ ವೆಚ್ಚದಲ್ಲಿ ಶಿಕ್ಷಣ ಪಡೆದಿರುತ್ತಾರೋ ಅಂತಹವರು ಜನರಿಗೆ ಅತ್ಯಲ್ಪ ಸಹಾನುಭೂತಿ ನೀಡುವುದಿಲ್ಲವೋ ಅಲ್ಲಿಯವರೆಗೆ ಪ್ರತಿಯೊಬ್ಬ ವ್ಯಕ್ತಿಯನ್ನು ದೇಶ ದ್ರೋಹಿಯೆಂದು ನಾನು ಕರೆಯುತ್ತೇನೆ" ಎಂದು ಘೋಷಿಸಿದರು.

***ಸೇವೆ - ಒಂದು ಪೂಜೆ.***

ದಿನಚರಿಯ ಕಾರ್ಯಕ್ರಮದಲ್ಲಿ ಸೇವೆ ಕೆಲಸದ ನೈತಿಕತೆಯನ್ನು ಹಾಗೂ ಮಾನವೀಯತೆಯನ್ನು ಪ್ರತಿಬಿಂಬಿಸುತ್ತದೆ. ಪ್ರತಿತ್ಯ ಬೇಸರಗೊಳ್ಳದೆ ವ್ಯಕ್ತಿ ತಾನು ಮಾಡುವ ಪ್ರತಿಯೊಂದು ಕಾರ್ಯದಲ್ಲಿಯೂ ವ್ಯಕ್ತಿಯ ಕಾರ್ಯ ಮತ್ತು ದೇಶದ ಹಿರಿಮೆಯನ್ನು ಪಾಲಿಸುತ್ತಿದ್ದೇನೆ ಎಂಬ ಭಾವನೆಯಿಂದ ಸತತವಾಗಿ ಕಾರ್ಯನಿರತವಾಗಿರಬೇಕು. ವ್ಯಕ್ತಿಗಳು ತಮ್ಮ ದೈಹಿಕ ಅಂಗವಾಗಿರುವ ವಿಕಾಸದ ವ್ಯಕ್ತಿತ್ವವನ್ನು ದಾಟಿ ಮನಃಸಾಕ್ಷಿಯಾಗಿ ಸಮಾಜದ ಆಗುಹೋಗುಗಳಲ್ಲಿ ಪಾಲ್ಗೊಂಡು ಆ ಮುಖೇನ ತನ್ನ ವಿಕಾಸ ವ್ಯಕ್ತಿತ್ವಕ್ಕೆ ಹೆಚ್ಚಿನ ಮೆರಗನ್ನು ಕೊಡಬೇಕು. ಶ್ರೀರಾಮಕೃಷ್ಣ ಪರಮಹಂಸರು ಹೇಳಿದಂತೆ "ಅಪರಿಪಕ್ವದ ಒಣಜಂಭ" ಇರುವವರು "ಮಾಗಿದ" ಅಥವಾ "ಪರಿಪಕ್ವವಾದ ತಾನು ಎಂಬ ಪರಿವರ್ತನಗೆ ಪ್ರಯತ್ನ ಅವಶ್ಯಕ" ಇದಕ್ಕಾಗಿ ವ್ಯಕ್ತಿ ದುಡಿಯಲು ಇತರರ ದುಡಿಮೆಯಲ್ಲಿ ಹಾಗೂ ಅವರ ಸ್ವಂತ ಜೀವನದಲ್ಲಿ ಅಭಿವೃದ್ಧಿ ಬಯಸಬೇಕಾದ ಕೌಶಲ್ಯತೆ ಅವಶ್ಯಕ. ಕೆಲಸ ಮಾಡುವಾಗ ದಿನದ ಒಂದು ನಿಮಿಷವನ್ನೂ ವೃಥಾ ಕಳೆಯಬಾರದು. ಸೇವೆ, ಶಿಸ್ತು, ಸಮರ್ಪಣೆ, ಪ್ರಾಮಾಣಿಕತೆ, ನಂಬಿಕೆಯ ಧೈರ್ಯದ ಪ್ರದರ್ಶನ ಇರಬೇಕು. ಕೆಲಸ ಮಾಡದೆ ಸುಮ್ಮನೆ ತುಕ್ಕು ಹಿಡಿಯುವ ಬದಲು ತಾಯ್ನಾಡಿನ ಸೇವೆಯಲ್ಲಿ ಗಂಧದ ಲೇಪನಕ್ಕಾಗಿ ಸಂಪೂರ್ಣ ಗಂಧವೇ ಸವೆಯುವಂತೆ ದುಡಿಯುತ್ತಾ ಮಡಿಯುವುದು ಮೇಲು.

ಹೀಗಾದಲ್ಲಿ ಸೇವೆ ದೇವರ ಪೂಜೆಯಾಗುತ್ತದೆ. ನೈತಿಕ ಬೆಂಬಲ ಹೊಂದಿರುವ ಕೆಲಸ ಮಾನವೀಯತೆಯನ್ನು ಮಿಡಿತವನ್ನು ಬೇಡುತ್ತದೆ. ಮಾನವೀಯತೆ ಸೇವೆಗಾಗಿ ವೇದಾಂತ ಮೇರು ಮಾರ್ಗದರ್ಶನಗಳು ಅಂದರೆ ದಮನ. (ಮನಸ್ಸನ್ನು ನಿಯಂತ್ರಣದಲ್ಲಿಡುವುದು) ದಯೆ (ಅನುಕಂಪ) ಮತ್ತು ದಾನ (ದೇಣಿಗೆ) ಬಲವಾದ ಬುನಾದಿಯಾಗುತ್ತದೆ.

ಸೇವೆಯು ಬರೀ ಬುದ್ಧಿಶಕ್ತಿಯಲ್ಲಿ ಕೊನೆಗಾಣಬಾರದು. ಅದು ನೈತಿಕವಾಗಿ ಬೆಲೆ ಹೊಂದುವಂತೆಯೂ ಇರಬೇಕು. ಅದನ್ನು ದಿನಚರಿ ಜೀವನದಲ್ಲಿ ಅಳವಡಿಸಿಕೊಳ್ಳಬೇಕಾದರೆ ಸ್ಥಳೀಯ ಉತ್ಪಾದನೆಯನ್ನು ಹೆಚ್ಚಿಸುವುದಕ್ಕೆ ಬೇಕಾದ ವಾತಾವರಣದಿಂದ ಕೂಡಿದರೆ ಅಷ್ಟೇ ಸಾಲದು. ಅದು ವ್ಯಕ್ತಿಯನ್ನು ಶಕ್ತಿ ಮೀರಿ ದುಡಿಯುವಂತೆ ಪ್ರಚೋದಿಸಬೇಕು. ಸ್ವಾರ್ಥವನ್ನು ಸಂಪೂರ್ಣವಾಗಿ ತ್ಯಜಿಸಬೇಕು. ಶ್ರೀ ಸ್ವಾಮಿ ವಿವೇಕಾನಂದರು ಈ ಸಂದರ್ಭದಲ್ಲಿ ಹೇಳಿದ ಮಾತು ಬಹಳ ಮಾರ್ಮಿಕ. "ಪ್ರಪಂಚದ ಮಾನವ ಕಲ್ಯಾಣಕ್ಕಾಗಿ ನೀವು ನಿಮ್ಮ ದೇಹ, ಮನಸ್ಸು ಮತ್ತು ನುಡಿಯನ್ನು ಮುಡಿಪಾಗಿಡಬೇಕು. ನೀವು ತಾಯಿಯನ್ನು ದೇವರಂತೆ ಕಾಣಿ, ತಂದೆಯನ್ನು ದೇವರಂತೆ ಕಾಣಿ ಎಂದು ಓದಿರಬೇಕು. ಆದರೆ ನಾನು ಇಚ್ಛಿಸುವುದು ಏನೆಂದರೆ ದೀನ ದಲಿತರು, ಅನಕ್ಷರಸ್ಥರು, ಅಜ್ಞಾನಿಗಳು, ಶೋಷಿತರಾದವರು, ನಿಮ್ಮ ದೇವರಾಗಲಿ. ಅಂತಹವರ ಸೇವೆಯೇ ಅತ್ಯುತ್ತಮ ಧರ್ಮ ಎಂದು ತಿಳಿಯಿರಿ. ಅದು ನಿಮ್ಮ ಜೀವನಕ್ಕೆ ಮತ್ತು ಸೇವೆಗೆ ಶಿಸ್ತನ್ನು ಕೊಡುವುದು."

***ಸಂಘಟನೆ***

ಸೇವೆ ಮಾಡಬೇಕೆಂದು ಹಂಬಲಿಸುವವರು ಅನೇಕ ಕಾರ್ಯಗಳಲ್ಲಿ ಒಂದಾದ ಯುವಕರನ್ನು ಸಂಘಟಿಸಬೇಕು. ಸ್ವಾಮೀಜಿಯವರೆ ಬಲವಾಗಿ ಪ್ರತಿಪಾದಿಸಿದಂತೆ "ನಾನು ಜನ್ಮ ತಾಳಿರುವುದು ಈ ಯುವಕರನ್ನು ಸಂಘಟಿಸುವುದಕ್ಕಾಗಿ - ನೂರಾರು ಯುವಕರು ಪ್ರತಿಯೊಂದು ಪಟ್ಟಣದಲ್ಲಿಯೂ ಅಥವಾ ನಗರದಲ್ಲಿಯೂ ಬಂದು ಸೇರಿಕೊಳ್ಳುವಂತೆ ಮಾಡಲು





ಜನ್ಮ ತಾಳಿದ್ದೇನೆ. ಈ ಸಂಘಟಿಸಿದ ಯುವಕರನ್ನು ದೇಶದಾದ್ಯಂತ ಕಳುಹಿಸುವೆನು. ಅವರು ದೇಶದಲ್ಲಿರುವಂತಹ ಸಂಪ್ರದಾಯಸ್ಥರ, ದೀನದಲಿತರ ಮತ್ತು ತುಳಿತಕ್ಕೆ ಒಳಗಾಗಿರುವ ಜನರ ಮನೆಯ ಬಾಗಿಲಿಗೆ ಹೋಗಿ ಅವರಿಗೆ ಸಮಾಧಾನವನ್ನು, ನೈತಿಕತೆಯನ್ನು, ಧರ್ಮವನ್ನು, ಶಿಕ್ಷಣವನ್ನು, ಕೊಡುವಂತೆ ಮಾಡುತ್ತೇನೆ. ನಾನು ಇದನ್ನು ಸಾಧಿಸುತ್ತೇನೆ. ಇಲ್ಲವಾದಲ್ಲಿ ಮರಣವನ್ನು ಅಪ್ಪುತ್ತೇನೆ."

ಮಾನವೀಯತೆಗೆ, ಅದರಲ್ಲೂ ಕಡು ಬಡವರಿಗೆ ಅಜ್ಞಾನಿಗಳಿಗೆ ಮತ್ತು ಶೋಷಣೆಗೆ ಒಳಗಾದವರಿಗೆ ಸೇವೆ ಮಾಡುವುದರಿಂದ ಆತ್ಮ ಸಾಕ್ಷಾತ್ಕಾರ ಸಾಧ್ಯ. ಶ್ರೀ ಸ್ವಾಮಿ ವಿವೇಕಾನಂದರು ಯುವಕ - ಯುವತಿಯರಿಗೆ ಉಡುಗೊರೆಯಾಗಿ ಕೊಟ್ಟಿರುವ ಆಸ್ತಿ ಅಂದರೆ ಅನುಕಂಪ, ದಯೆ ಮತ್ತು ಬಡತನ ನಿರ್ಮೂಲನಕ್ಕಾಗಿ ಅವಿರತ ದುಡಿತ. ಆದ್ದರಿಂದ ದಿನೇ ದಿನೇ ಲಕ್ಷಾಂತರ ಜನಗಳು ಹೆಚ್ಚು ಹೆಚ್ಚು ತುಳಿತಕ್ಕೆ ಒಳಗಾಗುತ್ತಿದ್ದು ಅಂತಹವರನ್ನು ಮೇಲೆ ಎತ್ತುತ್ತೇವೆ ಎಂಬ ಸಮರ್ಪಣಾ ಭಾವನೆಯಿಂದ ಅವರ ಸೇವೆಗಾಗಿ ಜೀವನವನ್ನು ಮುಡಿಪಾಗಿಡಬೇಕು. "ಒಬ್ಬ ವ್ಯಕ್ತಿ, ಸೇವೆಗಾಗಿ ಸಮರ್ಪಣೆ ಮಾಡಿಕೊಂಡಿದ್ದರಲ್ಲಿ ಆತ ಯಾರಿಗೂ ಹೆದರಬೇಕಾಗಿಲ್ಲ. ಜಗತ್ತಿನ ಯಾವ ಶಕ್ತಿಯೂ ಆತನ ಸೇವೆಯನ್ನು ನಿಲ್ಲಿಸಬಾರದು. ಯಾರು ಸೇವೆಯನ್ನು ದಿನಚರಿ ಜೀವನದ ಮಾರ್ಗವನ್ನಾಗಿ ಮಾಡಿಕೊಳ್ಳುತ್ತಾರೊ ಅಂತಹವರು ಸಿಂಹಗಳಂತೆ ಇರುವುದಲ್ಲದೆ, ಇಡೀ ಭಾರತವನ್ನು, ಅದು ಏಕೆ ಇಡೀ ವಿಶ್ವವನ್ನು ಹುರಿದುಂಬಿಸಬಲ್ಲರು. ಇತರರಿಗಾಗಿ ಮಾಡಿದ ಅತ್ಯಲ್ಪ ಸೇವೆಯು ವ್ಯಕ್ತಿಯಲ್ಲಿ ಅಂತರ್ಗತವಾಗಿರುವ ಶಕ್ತಿಯನ್ನು ಎಚ್ಚರಗೊಳಿಸುತ್ತದೆ. ಇತರರಿಗಾಗಿ ಅತ್ಯಲ್ಪ ಒಳಿತನ್ನು ಮಾಡುವ ಚಿಂತನೆ ಬಂದಲ್ಲಿ ಅದು ಕ್ರಮೇಣ ವ್ಯಕ್ತಿಯ ಹೃದಯಕ್ಕೆ ಸಿಂಹದ ಶಕ್ತಿಯನ್ನು ತುಂಬುತ್ತದೆ. ಆದ್ದರಿಂದ, ನಿಮ್ಮೆಲ್ಲರನ್ನೂ ನಾನು ಬಹಳವಾಗಿ ಪ್ರೀತಿಸುತ್ತಿದ್ದರೂ, ಇತರರಿಗಾಗಿ ನೀವೆಲ್ಲರೂ ದುಡಿದು ಮಡಿಯಿರಿ ಎಂದು ಇಚ್ಚಿಸುತ್ತೇನೆ.... ದುಡಿಮೆ, ದುಡಿಮೆ ಮತ್ತು ದುಡಿಮೆ ಆನಂತರ ಮರಣ. ಈ ಶ್ರಮದಲ್ಲಿ ನಾವು ನಮ್ಮ ಎಲ್ಲಾ ಆಸ್ತಿಯನ್ನು ಹಾಗೂ ಬೆಳೆಸಿಕೊಂಡ ಗೌರವ ಮತ್ತು ಹೆಸರನ್ನು ಕಳೆದುಕೊಳ್ಳುವುದಾದರೆ ಅಂತಹವರು ಮೂರು ಬಾರಿ ಆಶೀರ್ವದಿಸಲ್ಪಟ್ಟವರೆಂದು ತಿಳಿಯಬೇಕೆ". ಸ್ವಾಮೀಜಿಯವರು ಒಮ್ಮೆ ಪ್ರಚಂಡ ದೃಶ್ಯವನ್ನು ಕಂಡಿರುವಂತೆ "ಇತರರಿಗಾಗಿ ಮೋಕ್ಷವನ್ನು ಪಡೆಯಲು ನೀವೇ ನರಕಕ್ಕೆ ಹೋಗಿ" ಎಂದು ಹೇಳಿದ್ದುಂಟು.

***ಸಹಾಯ ಎಂಬ ಪದಕ್ಕೆ ಸ್ಥಾನವಿಲ್ಲ***

ಸೇವೆಯು ದಿನಚರಿಯ ಜೀವನದ ಒಂದು ಅವಿಭಾಜ್ಯವಾಗಬೇಕಾದರೆ ಕೆಲವು ಪೂರ್ವಭಾವಿ ನಿಯಮಗಳು ಅವಶ್ಯಕ.

೧. ಬೇರೆಯವರಿಗೆ ಸಹಾಯ ಮಾಡುತ್ತೇವೆ ಎಂಬ ಭಾವನೆ ಇರಕೂಡದು ಎಂಬುದನ್ನು ತಿಳಿಯಬೇಕು. ನಮ್ಮ ಮನಸ್ಸಿನಿಂದ 'ಸಹಾಯ' ಎಂಬ ಭಾವನೆಯನ್ನು ಕಿತ್ತೊಗೆಯಬೇಕು. 'ಸಹಾಯ' ಎಂಬ ಮಾತೇ ಆಡಬಾರದು. ಸೇವೆಯನ್ನು ಅಥವಾ ನೆರವನ್ನು ನೀಡಬೇಕೇ ವಿನಾ ಸಹಾಯ ಮಾಡುತ್ತೇನೆ ಎಂಬ ಅಹಂಭಾವ ಬೇಡ. "ನಿಮ್ಮನ್ನು ನೀವೇ ಒಂದು ರೀತಿಯಲ್ಲಿ ಮರೆತುಕೊಳ್ಳಬೇಕು." ನಿಮ್ಮ ಕಾರ್ಯವನ್ನು ಶೀಘ್ರವಾಗಿ, ದಕ್ಷತೆಯಿಂದ ಮತ್ತು ನ್ಯಾಯ ಸಮ್ಮತವಾಗಿ ಪರಿಪಾಲಿಸಬೇಕು. ನಾವು 'ಕೊಡುವವರು' ಎಂಬ ಮನೋಭಾವನೆಯನ್ನು ಬಿಟ್ಟು ಅಧಿಕಾರದಲ್ಲಿರುವವರು ಸೇವೆ ಮಾಡುವುದಕ್ಕೆ ಒಂದು ವಿಶೇಷ ಅವಕಾಶ ದೊರೆತಿದೆ ಎಂದು ಚಿಂತಿಸಬೇಕು. ನಮ್ಮೆಲ್ಲಾ ಆಸೆ ಆಕಾಂಕ್ಷೆಗಳನ್ನು ಮತ್ತು ಸ್ವಂತ ಸುಖವನ್ನು ಸಮಾಜದ ಕಲ್ಯಣಕ್ಕಾಗಿ ತ್ಯಾಗ ಮಾಡುವುದಕ್ಕೆ ಸಿದ್ಧವಾದಾಗ ಮಾತ್ರ ಇದು ಸಾಧ್ಯ. ಜನರ ಸಾಮೂಹಿಕ ಕಲ್ಯಾಣದಲ್ಲಿ ನಮ್ಮ ಕಲ್ಯಾಣವನ್ನು ಕಂಡುಕೊಳ್ಳಬೇಕು.

೨. ಸೇವೆ ಮಾಡಬೇಕು ಎಂಬ ಮನೋಭಾವ ನಮ್ಮ ಸಹೃದಯದಿಂದ ಜನಿಸಬೇಕು. ನಮ್ಮ ದೇಶದಲ್ಲಿ ಲಕ್ಷಾಂತರ ಜನರು ಅನ್ನವಿಲ್ಲದೆ ನರಳುತ್ತಿರುವುದು, ಬಡತನದ ಬೆಂಕಿಯಲ್ಲಿ ಬೇಯುತ್ತಿರುವುದು, ಶೋಷಣೆಗೆ ಒಳಗಾದವರು. ನಮ್ಮನ್ನು ಅಶಾಂತರನ್ನಾಗಿ ಮಾಡುವುದಲ್ಲದೆ ಅವಿಶ್ರಾಂತರನ್ನಾಗಿಯೂ ಮಾಡಬೇಕು. ಈ ಭಾವನೆ ನಮ್ಮ ರಕ್ತ ಕಣಗಳಲ್ಲಿ ಹರಿಯಬೇಕು. ಶ್ರೀ ಸ್ವಾಮಿ ವಿವೇಕಾನಂದರು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ "ಹೆಸರು, ಸಂಸಾರ, ಮಕ್ಕಳು, ಆಸ್ತಿ ಇವು ಯಾವುದಕ್ಕೂ ಆಸ್ಪದವಿಲ್ಲ. ನೀವು ನಿಮ್ಮ ದೇಹವನ್ನೂ ಕೂಡ ಮರೆತು ಬಿಡಬೇಕು" ಎಂದು ಹೇಳಿದರು.

೩. ನರಳುತ್ತಿರುವವರಿಗೆ ಸಾಂತ್ವನ ಕೊಡಬೇಕು. ನಮ್ಮ ಹೃದಯ ಅಂತಹವರಿಗೆ ಬಡಿಯುತ್ತಿರಬೇಕು. ಅವರ ತಾಪತ್ರಯಗಳಿಗೆ ಅವರ ಕರ್ಮವೇ ಕಾರಣವೆಂದು ಹೇಳುವುದನ್ನು ಬಿಟ್ಟು ಅವರಿಗೆ ಸಮಾಧಾನ ಮಾಡಿ ಅವರ ಸುಖ ದುಃಖದಲ್ಲಿ ಭಾಗಿಯಾಗುವುದಾದರೆ ನಾವು ಅವರಿಗೆ ಸುಖವನ್ನು ಕೊಡುವ ಪ್ರಯತ್ನದಲ್ಲಿ ಯಶಸ್ವಿಯಾಗಬಲ್ಲೆವು.

೪. ಹಿಮಾಲಯದಂತ ಅಡ್ಡಿ ಆತಂಕಗಳು ಬಂದಲ್ಲಿಯೂ ಅವನ್ನು ಪರಿಹರಿಸಿಕೊಳ್ಳುವ ಮಾನಸಿಕ ಸ್ಥೈರ್ಯ ಹೊಂದಿರಬೇಕು. ಒಂದು ಸಂದರ್ಭದಲ್ಲಿ ಸ್ವಾಮೀಜಿಯವರು ಪ್ರಶ್ನಿಸುತ್ತಾರೆ. "ಇಡೀ ಪ್ರಪಂಚವೇ ನಿನಗೆ ವಿರುದ್ಧವಾಗಿ ನಿಂತು ನಿನ್ನ ಶಿರಚ್ಛೇದನಕ್ಕಾಗಿ ಖಡ್ಗವನ್ನು ಹಿಡಿದಾಗ್ಯೂ, ನೀನು ನಿನಗೆ ಯಾವುದು ಸರಿಯೆಂದು ತೋಚುತ್ತದೊ ಅದನ್ನು ಮಾಡಲು ನೀನು ಸಿದ್ಧವಿರುವೆಯಾ?" ಸೇವೆ ನಿನ್ನ ಹಂಬಲವಾಗಿದ್ದಲ್ಲಿ, ಆ ಗುರಿಯನ್ನು ಮುಟ್ಟಲು ಮಿತಿಯಿಲ್ಲದ ತಾಳ್ಮೆಯಿಂದ ಅದರ ಪ್ರತಿಪಾದನೆಗೆ ಮುನ್ನುಗ್ಗಬೇಕು. "ಮನುಷ್ಯ ಕುಲಕ್ಕೆ ಸೇವೆಯನ್ನು ಮಾಡಬೇಕೆಂಬ ಹಂಬಲ ಇರುವವರು ಯಾರೂ ಹಿಂದೆ ತಿರುಗಿನೋಡುವುದಕ್ಕೆ ನಿಲ್ಲಲು ಅಸಾಧ್ಯ." ಒಮ್ಮೆ ಸ್ವಾರ್ಥವನ್ನು ಮನಸ್ಸಿನಿಂದ ಕಿತ್ತುಹಾಕಿದಾಗ, ರಾಜ ಠೀವಿಯಿಂದ, ಅಡೆತಡೆಗಳಿಲ್ಲದೆ ಹರಿಯುವ ಗಂಗಾ ನದಿಯಂತೆ ನಿಮ್ಮ ಸೇವೆ ತನ್ನಷ್ಟಕ್ಕೆ ತಾನೇ ನಡೆಯುತ್ತದೆ. ಇಂತಹ ನ್ಯಾಯಕ್ಕೆ ಮಿತಿಯಿಲ್ಲದ ಪ್ರಯತ್ನ, ಶಕ್ತಿ, ಹುಮ್ಮಸ್ಸು, ಧೈರ್ಯ, ಛಲ ಅವಶ್ಯಕ.

೫. ನಿನ್ನ ಸೇವೆಗೆ ಯಾವ ತರಹೆ ಪ್ರತಿಫಲವನ್ನು ಅಪೇಕ್ಷಿಸಬೇಡ - ನಿನ್ನ ಕೆಲಸವೇ ನಿನ್ನ ಪ್ರತಿಫಲವೆಂದು ತಿಳಿ. ಗೀತಾ ರಹಸ್ಯ ಎಂದೆಂದಿಗೂ ಮರೆಯಲಾರದಂತಹ ಸಂದೇಶವನ್ನು ಮಾನವಕುಲಕ್ಕೆ ನೀಡಿದೆ. ಇದೇ ನಾವು ಪದೇ ಪದೇ ಕೇಳುವ "ಯಾವ ಫಲವನ್ನೂ ಅಪೇಕ್ಷಿಸದೆ ನಿನ್ನ ಕಾರ್ಯವನ್ನು ಮಾಡು" ಎಂಬ ಭಗವದ್ಗೀತೆಯ ಸಾರಾಂಶ.

೬. ನಿಮ್ಮಲ್ಲಿ ನಿಮಗೆ ನಂಬಿಕೆ ಮತ್ತು ಆತ್ಮಶಕ್ತಿಯನ್ನು ಬೆಳೆಸಿಕೊಳ್ಳಬೇಕು. ಇದು ಆಗಬೇಕಾದರೆ ನಾವು ನೈತಿಕವಾಗಿ ಸರಿಯಾಗಿ ಇರುವುದಲ್ಲದೆ ಧೈರ್ಯದಿಂದಲೂ ಮುನ್ನುಗ್ಗಿ ಅತ್ಯಾವಶ್ಯಕವಾಗಿ ನೆರವು ಬೇಕಾಗಿರುವವರಿಗೆ ನಿಮ್ಮ ಹೃದಯ ಕರಗಬೇಕು. ಸಂಪೂರ್ಣ ಸಮರ್ಪಣೆಯಿಂದ ಮಾತ್ರ ಸೇವೆಯನ್ನು ಬದುಕಿನ ಒಂದು ಅನಿವಾರ್ಯ ಮಾರ್ಗವಾಗಿ ಪರಿವರ್ತಿಸಬಹುದು. ಅದೇ ಜೀವನದಲ್ಲಿ ನಿಮ್ಮ ಸಂಪೂರ್ಣ ಧ್ಯೇಯವಾಗಬೇಕು.

ಸೇವೆ ದಿನಚರಿಯ ಮಾರ್ಗವಾಗಿರಬೇಕಾದರೆ ಅದು ಪಾಂಡಿತ್ಯದ ಭಾವನೆ ಅಲ್ಲ; ಅದು ಸಂಪ್ರದಾಯಗಳ ಸಮಾರಂಭದ ಉತ್ಸವವೂ ಅಲ್ಲ; ಅದು ಅಸ್ಪಷ್ಟವಾದ ಸಾಮಾಜಿಕ ಮಾದರಿ ವಾದವೂ ಅಲ್ಲ; ಅದು ಆಧ್ಯಾತ್ಮಿಕ ಸತ್ಯ. ನಮ್ಮ ಬಾಳಿಗೆ ಅರ್ಥ ಮತ್ತು ವಸ್ತು ಸ್ಥಿತಿಯನ್ನು ಒದಗಿಸುತ್ತದೆ. ಅದು ನಮ್ಮ ತೀವ್ರ ದುಃಖದ ಪರಿಸ್ಥಿತಿಯಲ್ಲಿ ಹಾಗೂ ನಮ್ಮ ಅಗ್ನಿ ಪರೀಕ್ಷೆಯ ಕಾಲದಲ್ಲಿ ನಮಗೆ ಸಾಂತ್ವನವನ್ನು ಕೊಡುವ ಶಕ್ತಿ. ಸೃಷ್ಟಿಯ ಗರ್ಭದಲ್ಲಿ ಅಡಗಿರುವ ಪ್ರೀತಿ, ನ್ಯಾಯ, ಗಾಢ ನಂಬಿಕೆ. ಮಾನವ ಅಭಿವೃದ್ಧಿಗೆ ಕಾರಣವಾದ ಈ ಶಕ್ತಿ ಆತನ ಪರಿಪಕ್ವತೆಗೆ ಸದಾ ಪ್ರಯತ್ನಿಸುವ ನಂಬಿಕೆಗೆ ಅರ್ಹವಾದ ಚೇತನ. ಈಗಿನ ಸನ್ನಿವೇಶದಲ್ಲಿ ಚುನಾಯಿತ ಪ್ರತಿನಿಧಿಗಳು, ಸರ್ಕಾರಿ ನೌಕರರು, ವಿವಿಧ ಕ್ಷೇತ್ರಗಳಲ್ಲಿ ದುಡಿಯುತ್ತಿರುವವರೆಲ್ಲರೂ ಇಂತಹ ಸೇವೆಯನ್ನು ಬಾಳಿನ ದಿನಚರಿಯ ಮಾರ್ಗವಾಗಿ ಸಲ್ಲಿಸಲು ಪಣ ತೊಡುತ್ತಾರೆಂದು ನಂಬಬಹುದೇ?

## ಒಂದು ಮನವಿ

ಪರಮಪೂಜ್ಯ ಶ್ರೀ ಶ್ರೀಗಳವರ ಶತಮಾನೋತ್ಸವ ಆಚರಿಸುವ ಭಾಗ್ಯವಂತರಾದ ತಮ್ಮಲ್ಲಿ ಒಂದು ನಮ್ರ ಮನವಿ. ಕೇವಲ ಒಂದು ಸಾವಿರ ರೂ.ಗಳನ್ನು ನಿಶ್ಚಿತ ಠೇವಣಿಯಾಗಿಡುವುದರ ಮೂಲಕ ಶ್ರೀಗಳವರ ಶತಮಾನೋತ್ಸವದ ಭವ್ಯ ಯೋಜನೆಗೆ ಸಹಕರಿಸುವ ಸುವರ್ಣಾವಕಾಶವನ್ನು ತಾವು ಬಳಸಿಕೊಳ್ಳಬೇಕಾಗಿ 'ಸಿದ್ಧಗಂಗಾ' ಪ್ರಾರ್ಥಿಸುತ್ತದೆ.

ಠೇವಣಿಯನ್ನು 'ಶ್ರೀ ಶಿವಕುಮಾರ ಸ್ವಾಮಿಗಳವರ ಶತಮಾನೋತ್ಸವ ನಿಧಿ' ಎಂಬ ಹೆಸರಿನಲ್ಲಿ ಸಿದ್ಧಗಂಗಾ ಅರ್ಬನ್ ಕೋ-ಆಪರೇಟೀವ್ ಬ್ಯಾಂಕ್ - ತುಮಕೂರು ಇಲ್ಲಿಗೆ ಕಳುಹಿಸಲು ವಿನಂತಿಸಲಾಗಿದೆ.

## ಪತ್ರಿಕೆ ಕುರಿತು

'ಸಿದ್ಧಗಂಗಾ' ಮಾಸ ಪತ್ರಿಕೆ ತಲುಪಿತು. ಪತ್ರಿಕೆ ನೋಡಿ ತುಂಬಾ ಸಂತೋಷವಾಯಿತು. ಪತ್ರಿಕೆಯು ವಿನ್ಯಾಸ, ಆಕರ್ಷಕ ಮುದ್ರಣ ಹಾಗೂ ಮೌಲಿಕ ಲೇಖನಗಳಿಂದ ಕೂಡಿದ್ದು ಇದೊಂದು ಅತ್ಯುತ್ತಮ ಮಾಸಪತ್ರಿಕೆಗಳಲ್ಲಿ ಒಂದಾಗಿದೆ ಎಂದು ತಿಳಿಸಲು ಅಭಿಮಾನವೆನಿಸುತ್ತದೆ. ಸಂಪಾದಕ ವರ್ಗಕ್ಕೆ ಧನ್ಯವಾದಗಳು

ಶ್ರೀ ಶ್ರೀಶೈಲ ಮ ಕಟ್ಟಿ
482/2A, ಬಾಗವಾನ ಚಾಳ
ಬೈಲಹೊಂಗಲ-591102
ಬೆಳಗಾವಿ ಜಿಲ್ಲೆ





# ನಮ್ಮ ರಾಷ್ಟ್ರಧ್ವಜ

-- ಮೋಹನ ಭದ್ರಾಪೂರ
ಸಹಾಯಕ ನಿರ್ದೇಶಕರು
ವಾರ್ತಾ ಮತ್ತು ಪ್ರಚಾರ ಇಲಾಖೆ

**ತ್ರಿವರ್ಣದ ಭಾರತೀಯ ರಾಷ್ಟ್ರಧ್ವಜಕ್ಕೆ ತನ್ನದೇ ಆದ ಇತಿಹಾಸವಿದೆ. ಭಾರತದ ಸ್ವಾತಂತ್ರ್ಯದ ಹೋರಾಟದಲ್ಲಿ ಭಾಗವಹಿಸಿದವರಲ್ಲಿ ಹಲವರು ಭಾರತಕ್ಕೆ ಒಂದು ಧ್ವಜವನ್ನು ರೂಪಿಸಲು ಶ್ರಮಿಸಿದರು. ಹಲವು ಮಜಲುಗಳನ್ನು ದಾಟಿ ಪ್ರಸಕ್ತ ರಾಷ್ಟ್ರಧ್ವಜ ರೂಪಗೊಂಡಿದೆ. ರಾಷ್ಟ್ರಧ್ವಜ ರಾಷ್ಟ್ರದ ಸಂಕೇತ. ಅದಕ್ಕೆ ಸಲ್ಲಿಸುವ ಗೌರವ, ರಾಷ್ಟ್ರಕ್ಕೆ ಸಲ್ಲಿಸುವ ಗೌರವ. ರಾಷ್ಟ್ರಧ್ವಜದ ಇತಿಹಾಸ ಮತ್ತು ಅದರ ಬಗ್ಗೆ ಭಾರತೀಯ ನಾಗರಿಕ ನಡೆದುಕೊಳ್ಳಬೇಕಾದ ರೀತಿಯ ಬಗ್ಗೆ ಲೇಖನದಲ್ಲಿ ಸೂಕ್ಷ್ಮವಾಗಿ ವಿವರಿಸಲಾಗಿದೆ.**

"ಧ್ವಜ ಎಲ್ಲ ರಾಷ್ಟ್ರಗಳಿಗೂ ಅಗತ್ಯ" ಇದಕ್ಕಾಗಿ ಲಕ್ಷಗಟ್ಟಲೆ ಜನರರು ತಮ್ಮ ಜೀವನವನ್ನು ಅರ್ಪಿಸಿದ್ದಾರೆ. ಇದು ಒಂದು ಬಗೆಯ ಮೂರ್ತಿ ಪೂಜೆ. ಇದನ್ನು ನಾಶ ಪಡಿಸುವುದು ಪಾಪಕೃತ್ಯ. ಇದು ಆದರ್ಶದ ಪ್ರತಿನಿಧಿ. ಭಾರತೀಯರಿಗೆ ಭಾರತದಲ್ಲಿ ವಾಸ ಮಾಡುತ್ತಿರುವ ಹಿಂದೂ ಮುಸ್ಲೀಮ್, ಕ್ರಿಶ್ಚಿಯನ್, ಜ್ಯೂ, ಪಾರ್ಸಿ ಮೊದಲಾದವರಿಗೆ ಸರ್ವ ಸಾಮಾನ್ಯವಾದ ಧ್ವಜವೊಂದನ್ನು ಅಂಗೀಕರಿಸಿ ಅದಕ್ಕಾಗಿ ಬದುಕುವುದು ಅಗತ್ಯವಾಗಿದೆ."

ಇದು ನಮ್ಮ ಸ್ವಾತಂತ್ರ್ಯ ರೂವಾರಿ ಹಾಗೂ ರಾಷ್ಟ್ರಪಿತ ಮಹಾತ್ಮಾಗಾಂಧೀಜಿ ಅವರು ರಾಷ್ಟ್ರಧ್ವಜದ ಬಗ್ಗೆ ವ್ಯಕ್ತಪಡಿಸಿದ ಅಭಿಪ್ರಾಯ. ಈ ಮಾತುಗಳು ರಾಷ್ಟ್ರಧ್ವಜದ ಮಹತ್ವ ಹಾಗೂ ಆ ಮೂಲಕ ರಾಷ್ಟ್ರಕ್ಕಾಗಿ ನಮ್ಮ ಕರ್ತವ್ಯವನ್ನು ಸೂಚಿಸುತ್ತವೆ. ಈ ರಾಷ್ಟ್ರಧ್ವಜದ ಐತಿಹ್ಯ ಹಾಗೂ ಉಪಯೋಗವನ್ನು ಕುರಿತು ಅರಿತುಕೊಳ್ಳುವುದು ಪ್ರತಿಯೊಬ್ಬ ಭಾರತೀಯನ ಕರ್ತವ್ಯ.

### ಸ್ವಾತಂತ್ರ್ಯ ಹೋರಾಟಕ್ಕೆ ಪ್ರೇರಕ

ನಮ್ಮ ಸ್ವಾತಂತ್ರ್ಯ ಹೋರಾಟದ ಇತಿಹಾಸದೊಂದಿಗೆ ರಾಷ್ಟ್ರಧ್ವಜ ಇತಿಹಾಸವೂ ಮೂಡಿಬರುತ್ತದೆ. ಕೆಂಪು, ಹಳದಿ ಮತ್ತು ಹಸಿರು ಪಟ್ಟಿಗಳಿರುವ ಮೊದಲ ರಾಷ್ಟ್ರಧ್ವಜವನ್ನು ಕಲ್ಕತ್ತಾದ ಗ್ರೀನ್‌ಪಾರ್ಕ್ (ಆಗ ಪಾಸಿ ಬಗನ್ ಚೌಕ) ದಲ್ಲಿ ೧೯೦೬ನೇ ಆಗಸ್ಟ್ ೭ರಂದು ಹಾರಿಸಿರುವುದು ಚರ್ಚೆಯ ವಿಷಯವಾಗಿದೆ. ಆದರೆ ೧೯೦೭ರಲ್ಲಿ ಪ್ಯಾರಿಸ್ಸಿನಲ್ಲಿ ಶ್ರೀಮತಿ ಕಾಮಾ ಹಾಗೂ ಹಲವು ಕ್ರಾಂತಿಕಾರರು ನಮ್ಮ ರಾಷ್ಟ್ರಧ್ವಜವನ್ನು ರೂಪಿಸಿ ಹಾರಿಸಿರುವುದು ತಿಳಿಯುತ್ತದೆ. ಇದು ಮೇಲಿನ ಪತಾಕೆಯ ಬಣ್ಣಗಳನ್ನು ಹೊಂದಿದ್ದು ಮಧ್ಯದಲ್ಲಿ ವಂದೇ ಮಾತರಂ ಎಂದು ದೇವನಾಗರಿ ಲಿಪಿ ಸೂಚಿಸುವ ಏಳು ನಕ್ಷತ್ರಗಳಿದ್ದವು. ಕೆಳಗಿನ ಹಸಿರು ಪಟ್ಟಿಯಲ್ಲಿ ಎಡಕ್ಕೆ ಸೂರ್ಯ ಹಾಗೂ ಬಲಕ್ಕೆ ಅರ್ಧಚಂದ್ರ ಹಾಗೂ ನಕ್ಷತ್ರವನ್ನು ಚಿತ್ರಿಸಲಾಗಿತ್ತು. ಇಲ್ಲಿಂದ ನಮ್ಮ ರಾಷ್ಟ್ರಧ್ವಜವು ರಾಜಕೀಯ ಹೋರಾಟದ ಮಾರ್ಗದೊಂದಿಗೆ ಬದಲಾವಣೆಗಳನ್ನು ಕಾಣುತ್ತ ಬಂದಿತು.

ಇದು ಕೆಂಪು ಪಟ್ಟಿಯಲ್ಲಿ ಏಳು ನಕ್ಷತ್ರಗಳ ಯೂನಿಯನ್ ಜಾಕ್, ಅರ್ಧಚಂದ್ರ ಹಾಗೂ ನಕ್ಷತ್ರವನ್ನೊಳಗೊಂಡ ಧ್ವಜವನ್ನು ೧೯೧೭ರಲ್ಲಿ ಡಾ. ಅನಿಬೆಸಂಟ್ ಹಾಗೂ ಲೋಕಮಾನ್ಯ ತಿಲಕರು



ಶ್ರೀಮತಿ ಕಾಮಾ ಮತ್ತು ಆಕೆಯ ದೇಶ ಭ್ರಷ್ಟರಾದ ಕ್ರಾಂತಿಕಾರರ ಪಂಗಡ ೧೯೦೭ರಲ್ಲಿ ಹಾರಿಸಿದ ಪತಾಕೆ



೧೯೧೭ರಲ್ಲಿ ಸ್ವಯಮಾಡಳಿತೆಯ ಚಳವಳಿಯ ಕಾಲದಲ್ಲಿ ಡಾ. ಅನಿಬೆಸೆಂಟ್ ಮತ್ತು ಲೋಕಮಾನ್ಯ ತಿಲಕರು ಹಾರಸಿದ ಪತಾಕೆ

ಹಾರಿಸಿದರು. ಮೋಹನದಾಸ ಕರಮಚಂದ ಗಾಂಧೀ ಅವರು ಸ್ವಾತಂತ್ರ್ಯ ಆಂದೋಲನದ ಧುರೀಣತ್ವವನ್ನು ವಹಿಸಿದ ನಂತರ ೧೯೨೧ರಲ್ಲಿ ತ್ರಿವರ್ಣ ಧ್ವಜ ರೂಪುಗೊಂಡಿತು. ಇದರಲ್ಲಿ ಕೆಂಪು, ಹಸಿರು ಹಾಗೂ ಬಿಳಿ ಪಟ್ಟಿಯಲ್ಲಿ ಪ್ರಗತಿ ಸೂಚಕವಾಗಿ ಚರಕದ ಚಿತ್ರವಿದ್ದಿತು. ಇಂದಿನ ತ್ರಿವರ್ಣ ಪತಾಕೆಯು೧೯೪೭ರಲ್ಲಿ ರೂಢಿಗೆ ಬಂದಿತು. ಕೇಸರಿ, ಬಿಳಿ ಹಾಗೂ ಹಸಿರು ಬಣ್ಣಗಳೊಂದಿಗೆ ಬಿಳಿ ಬಣ್ಣದ ಮಧ್ಯ ನೀಲಿ ಬಣ್ಣದಲ್ಲಿ ಚರಕವಿರುವ ಧ್ವಜವನ್ನು ರಾಷ್ಟ್ರ ಪತಾಕೆಯಾಗಿ ಅಂಗೀಕರಿಸಿತು. ನಮ್ಮ ಮೊದಲ ಪ್ರಧಾನಮಂತ್ರಿ ಪಂಡಿತ್ ಜವಾಹರಲಾಲ ನೆಹರು ಅವರು ಮಂಡಿಸಿದ ಠರಾವಿನ ಪೂರ್ಣ ಪಾಠ ಇಂತಿವೆ.

***ರೂಪ ಹಾಗೂ ಸಾಂಕೇತಿಕ ಅರ್ಥ***

"ಭಾರತದ ರಾಷ್ಟ್ರ ಪತಾಕೆ ಸಮಮಟ್ಟವಾಗಿರಬೇಕು. ಕೇಸರಿ, ಬಿಳಿ ಹಾಗೂ ಕಡು ಹಸಿರು ಬಣ್ಣಗಳು ಸಮಾಂಶದಲ್ಲಿರುವ ತ್ರಿವರ್ಣವುಳ್ಳದ್ದಾಗಿರಬೇಕು. ಬಿಳಿ ಪಟ್ಟಿಯ ಮಧ್ಯದಲ್ಲಿ ಚರಕವನ್ನು ಪ್ರತಿನಿಧಿಸುವ ನೀಲಿ ಬಣ್ಣದ ಚಕ್ರವಿರಬೇಕು. ಇದು ಅಶೋಕ ಸಾರಾನಾಥ ಸಿಂಹ ಸ್ತಂಭದ ಚೌಕಟ್ಟಿನಲ್ಲಿರುವ ಚಕ್ರದಂತಿರಬೇಕು. ಚಕ್ರದ ವ್ಯಾಸ ಬಿಳಿಪಟ್ಟಿಯ ಅಗಲಕ್ಕೆ ಸರಿಯಾಗಿರಬೇಕು. ಪತಾಕೆಯ ಉದ್ದಗಲ ೩ :೨ ರಷ್ಟಿರಬೇಕು."

ಈ ಗೊತ್ತುವಳಿಯ ಮೇಲೆ ಭಾಷಣ ಮಾಡಿದ ಪಂಡಿತ ನೆಹರೂ ಅವರು ಪತಾಕೆಯನ್ನು ರೂಪಿಸಿದ ಬಗ್ಗೆನುಡಿದ ಮಾತುಗಳು ಅದರ ಮಹತ್ವವನ್ನು ಬಿಂಬಿಸುತ್ತವೆ. "ಕೆಲವರು ಇದರ ಅರ್ಥವನ್ನು ತಪ್ಪಾಗಿ ತಿಳಿದಿದ್ದರು. ಈ ಪತಾಕೆಯನ್ನು ರೂಪಿಸಿದಾಗ ಯಾವ ಮತೀಯ ಅರ್ಥವನ್ನು ಇದಕ್ಕೆ ಅನ್ವಯಿಸಿದ್ದಿಲ್ಲವೆಂದು ನಾನು ಹೇಳಬಲ್ಲೆ. ಪತಾಕೆಯು ತನ್ನ ಭಾಗಗಳ ಸಮನ್ವಯದಲ್ಲಿ ಹಾಗೂ ತನ್ನ ಬೇರೆ ಬೇರೆ ಭಾಗಗಳಲ್ಲಿ ರಾಷ್ಟ್ರ ಚೈತನ್ಯವನ್ನು ಸಾವಿರಾರು ವರ್ಷಗಳಿಂದ ತನ್ನ ವೈಶಿಷ್ಟವಾದ ಸಮನ್ವಯ ಸಂಪ್ರದಾಯವನ್ನು ಪ್ರತಿನಿಧಿಸುವ ಆಕೃತಿಯನ್ನು ಪತಾಕೆಯ ಬಗ್ಗೆ ಆಲೋಚಿಸಿದೆವು" ಇದು ಸ್ವಾತಂತ್ರ್ಯದ ಪತಾಕೆಯಾಗಿದೆ. ಇದು ನಮ್ಮ ಸ್ವಾತಂತ್ರ್ಯ ಪತಾಕೆ ಮಾತ್ರವಲ್ಲ. ಇದನ್ನು ನೋಡುವ ಜನರೆಲ್ಲರ ಸ್ವಾತಂತ್ರ್ಯ ಪತಾಕೆಯಾಗಿದೆ ಎಂಬ ಆಶೆ ನನಗೆ ಇದೆ.

ತತ್ವಜ್ಞಾನಿ ಡಾ. ಸರ್ವಪಲ್ಲಿ ರಾಧಾಕೃಷ್ಣನ್ ಇದಕ್ಕೆ ಆಧ್ಯಾತ್ಮಿಕ ಅರ್ಥ ನೀಡಿದ್ದಾರೆ. ಅವರು ಹೇಳುವಂತೆ "ಕೇಸರಿ ಬಣ್ಣ ವೈರಾಗ್ಯ ಇಲ್ಲವೆ ಅನಾಸಕ್ತಿಯನ್ನು ಸೂಚಿಸುತ್ತದೆ. ನಮ್ಮ ಧುರೀಣರು ವಾಸ್ತವಿಕ ಲಾಭಗಳ ಬ್ಗಗೆ ಅನಾಸಕ್ತರಾಗಿ ತಮ್ಮ ಕೆಲಸಕ್ಕೆ ಜೀವನವನ್ನು ಮುಡಪಾಗಿಡಬೇಕು. ಪತಾಕೆಯ ನಡುವಿನ ಬಿಳಿ ಬಣ್ಣ ಬೆಳಕನ್ನು ನಮ್ಮ ವರ್ತನೆಯನ್ನು ಮುಂದೆ ಸಾಗುವ ಸತ್ಯ ಮಾರ್ಗವನ್ನು ಸೂಚಿಸುತ್ತದೆ. ಹಸಿರು ಬಣ್ಣ ನಮಗೆ ಮಣ್ಣಿನೊಡನಿರುವ ಹಾಗೂ ಇತರ ಜೀವಿಗಳಿಗೂ ಆಧಾರವಾದ ಸಸ್ಯಜೀವನದೊಡನಿರುವ ಸಂಬಂಧವನ್ನು ಸೂಚಿಸುತ್ತದೆ."

"ಬಿಳಿ ಪಟ್ಟಿಯ ಮಧ್ಯದಲ್ಲಿರುವ ಅಶೋಕ ಚಕ್ರವೇ ಧರ್ಮ ಚಕ್ರ. ಸತ್ಯ ಧರ್ಮಗಳು ಈ ಪತಾಕೆಯ ಅಡಿಯಲ್ಲಿ ಕೆಲಸ ಮಾಡುವವರಿಗೆಲ್ಲ ಹತೋಟಿಯಲ್ಲಿರಿಸುವ ತತ್ವಗಳಾಗಿರಬೇಕು. ಜಡತೆಯಲ್ಲಿ ಮೃತ್ಯುವಿದೆ. ಚಲನೆಯಲ್ಲಿ ಜೀವರಸವಿದೆ. ಚಕ್ರ ಶಾಂತಿಪೂರ್ಣವಾದ ಪ್ರಗತಿಯ ಚಾಲನೆಯ ಪ್ರತೀಕವಾಗಿದೆ."

**ನಿಯಮಗಳು**

ರಾಷ್ಟ್ರ ಪತಾಕೆಯ ಉಪಯೋಗದಲ್ಲಿ ಕಠಿಣವಾದ ನಿಯಮಗಳಿವೆ. ಇದನ್ನು ಸರಿಯಾಗಿ ತಿಳಿದುಕೊಂಡು ಅನುಸರಿಸುವುದೇ ರಾಷ್ಟ್ರ ಪತಾಕೆಯನ್ನು ಗೌರವಿಸುವುದು. ಪತಾಕೆಯನ್ನು ಏರಿಸುವ ಇಳಿಸುವ, ಅರ್ಧಕ್ಕೆ ಇಳಿಸುವ ಹಾಗೂ



೧೯೨೧ರಲ್ಲಿ ಗಾಂಧೀಜಿಯವರು ಅಂಗೀಕರಿಸಿದ ತ್ರಿವರ್ಣ ಪತಾಕೆ





ವಂದಿಸುವ ಕ್ರಮಗಳನ್ನು ಎಲ್ಲ ಸಂಸ್ಥೆಗಳು, ವ್ಯಕ್ತಿಗಳೂ ಕಾಲಕ್ಕೆ ಸರಿಯಾಗಿ ಪಾಲಿಸಬೇಕು.

ಪತಾಕೆಯ ತಯಾರಿಕೆ ವಸ್ತು, ಗಾತ್ರ ಹಾಗೂ ಬಣ್ಣಗಳನ್ನು ಪ್ರಮಾಣೀಕರಿಸಲಾಗಿದೆ. ಬಣ್ಣಗೆಟ್ಟ. ಅಳತೆಗೆಟ್ಟ ಪತಾಕೆಯಂಥ ಅಗೌರವದ, ಹೇಯವಾದ ವಸ್ತು ಬೇರೊಂದಿಲ್ಲ. ಪ್ರಮಾಣೀಕೃತ ಪತಾಕೆಯ ಮುದ್ರಿತ ಮಾದರಿಯನ್ನು ಭಾರತೀಯ ಮಾಸಕ ಸಂಸ್ಥೆಯ ಅಧೀನದಲ್ಲಿ ಇರಿಸಲಾಗಿದೆ. ಪತಾಕೆಯ ಎರಡು ಬಣ್ಣಗಳನ್ನು ಭಾರತೀಯ ಕೇಸರಿ ಹಾಗೂ ಭಾರತೀಯ ಹಸಿರು ಎಂದು ವರ್ಣಿಸಲಾಗಿದೆ. ಈ ಎರಡು ಬಣ್ಣಗಳು ಜಗತ್ತಿನ ಪ್ರಮಾಣೀಕೃತ ವರ್ಣಪಟ್ಟಿಯಲ್ಲಿ ಇಲ್ಲ. ವೈಶಿಷ್ಟಪೂರ್ಣವಾದ ಭಾರತೀಯ ಹಸಿರು ಹಾಗೂ ಕೇಸರಿ ಬಣ್ಣಗಳನ್ನು ಟ್ರೆಕ್ರೋಮಿಕ್ ಪದ್ಧತಿಗಳಿಂದ ಶಾಸ್ತ್ರೀಯವಾಗಿ ನಿರ್ಣಯಿಸಿಲಾಗಿದೆ. ಪತಾಕೆಗೆ ಹತ್ತಿ ಖಾದಿ, ನೂತ ಉಣ್ಣೆ ಹಾಗೂ ರೇಷ್ಮೆಬಟ್ಟೆಯನ್ನು ಉಪಯೋಗಿಸಬೇಕೆಂದು ನಿರ್ಧರಿಸಲಾಗಿದೆ. ರಾಷ್ಟ್ರಧ್ವಜಕ್ಕೆ ತೋರಬೇಕಾದ ಮರ್ಯಾದೆ ಹಾಗೂ ಉಪಯೋಗದ ನಿಯಮಗಳಿಗಾಗಿ 'ಭಾರತ ಪತಾಕಾ ನಿಯಮ'ವನ್ನು ಸರ್ಕಾರ ರೂಪಿಸಿದೆ.

ಸಾರ್ವಜನಿಕ ಕಟ್ಟಡಗಳ ಮೇಲೆ ಪತಾಕೆಯನ್ನು ಪ್ರದರ್ಶಿಸುವ ಸಂದರ್ಭದಲ್ಲಿ ಹವೆಯ ಪರಿಸ್ಥಿತಿಯನ್ನು ಲೆಕ್ಕಿಸದೇ ಸೂರ್ಯೋದಯದಿಂದ ಸೂರ್ಯಾಸ್ತದವರೆಗೆ ರವಿವಾರ ಹಾಗೂ ರಜಾ ದಿನ ಸಹಿತ ಎಲ್ಲ ದಿನಗಳಲ್ಲಿ ಪ್ರದರ್ಶಿಸಬೇಕು. ಅಂತಹ ಕಟ್ಟಡಗಳ ಮೇಲೆ ವಿಶೇಷ ಸಂದರ್ಭಗಳಲ್ಲಿ ರಾತ್ರಿಯೂ ರಾಷ್ಟ್ರ ಪತಾಕೆಯನ್ನು ಪ್ರದರ್ಶಿಸಬಹುದು.

ಪತಾಕೆಯನ್ನು ತೀವ್ರವಾಗಿ ಏರಿಸಬೇಕು. ವಿಧಿಪೂರ್ವಕ ವಾಗಿ ಮೆಲ್ಲನೆ ಇಳಿಸಬೇಕು. ಸರಿಯಾದ ಕಹಳೆ ಇದ್ದಾಗ ಕಹಳೆಯ ವಾದ್ಯ ಹಾಗೂ ಪತಾಕೆಯ ಆರೋಹಣ ಹಾಗೂ ಅವರೋಹಣ



೧೯೩೧ರಲ್ಲಿ ಕಾಂಗ್ರೆಸ್ ಔಪಚಾರಿಕವಾಗಿ ಅಂಗೀಕರಿಸಿದ ಪತಾಕೆ



೧೯೩೧ರಲ್ಲಿ ಸೂಚಿಸಲಾದ ಹಾಗೂ ಕಾಂಗ್ರೆಸ್ ಅಂಗೀಕರಿಸಿದ ಪತಾಕೆ

ಎರಡು ಕಾಲಗಳಲ್ಲಿ ನಡೆಯಬೇಕು. ರಾಷ್ಟ್ರಧ್ವಜವನ್ನು ಕಿಟಕಿ, ಬಾಲ್ಕನಿಯಿಂದ ಇಲ್ಲವೆ ಕಟ್ಟಡದ ಮುಂಭಾಗದಿಂದ ಅಡ್ಡವಾಗಿ ಚಾಚಿಕೊಂಡಿರುವ ದಂಡದಿಂದ ಏರಿಸುವಾಗ ಕೇಸರಿ ಬಣ್ಣದ ಬದಿ ದಂಡದ ತುತ್ತ ತುದಿಯಲ್ಲಿರಬೇಕು. ದಂಡದಿಂದ ಇಳಿಯ ಬಿಡದೆ ಬೇರೆ ರೀತಿಯಲ್ಲಿ ಪ್ರದರ್ಶಿಸುವಾಗ ಕೇಸರಿ ಪಟ್ಟಿ ಮೇಲಿನ ಭಾಗದಲ್ಲಿರಬೇಕು.

ಪೂರ್ವಪಶ್ಚಿಮವಾಗಿ ಅಥವಾ ಉತ್ತರ ದಕ್ಷಿಣವಾಗಿ ಸಾಗಿದ ರಸ್ತೆಯ ನಡುವೆ ಏರಿಸುವಾಗ ಪತಾಕೆಯನ್ನು ನೇರವಾಗಿ ಕೇಸರಿ ಬಣ್ಣದ ಪಟ್ಟೆ ಸಂದರ್ಭಾನುಸಾರ ಉತ್ತರ ಇಲ್ಲವೆ ಪೂರ್ವ ದಿಕ್ಕಿಗೆ ಬರುವಂತೆ ಇಳಿಯ ಬಿಡಬೇಕು. ಭಾಷಣಕಾರರ ವೇದಿಕೆಯ ಮೇಲೆ ಹಾರಿಸುವ ಪ್ರಸಂಗದಲ್ಲಿ ಪತಾಕೆ ಭಾಷಣಕಾರರ ಬಲ ಬದಿಗೆ ಇರಬೇಕು. ಬೇರೆ ರೀತಿಯಲ್ಲಿ ಪ್ರದರ್ಶಿಸಿದಾಗ ಭಾಷಣಕಾರ ಮೇಲ್ಗಡೆಗೆ ಹಾಗೂ ಹಿಂಬದಿಗೆ ಇರಬೇಕು. ಪ್ರತಿಮೆಗಳ ಅನಾವರಣದ ಸಂದರ್ಭದಲ್ಲಿ ಪತಾಕೆಯನ್ನು ಗೌರವ ಪೂರ್ವಕವಾಗಿ ಪ್ರತ್ಯೇಕವಾಗಿ ಹಾರಿಸಬೇಕು. ಮೋಟಾರು ಕಾರು ಮೇಲೆ ಸ್ಥಿರವಾಗಿ ಇರುವ ಶಲಾಕೆಯಿಂದ ಪ್ರದರ್ಶಿಸಬೇಕು. ಪತಾಕೆಯನ್ನು ಮೆರವಣಿಗೆ ಇಲ್ಲವೇ ಸೇನಾ ಪ್ರದರ್ಶನದಲ್ಲಿ ಒಯ್ಯುವಾಗ ಮೆರವಣಿಗೆ ಇಲ್ಲವೆ ಸೇನೆ ಸಾಗುವುದರ ಬಲಭಾಗದಲ್ಲಿ ಇರುವಂತೆ ನೋಡಿಕೊಳ್ಳಬೇಕು. ಇತರ ಪತಾಕೆಗಳೊಂದಿಗೆ ಇದ್ದರೆ ರಾಷ್ಟ್ರ ಪತಾಕೆ ಸಾಲಿನ ನಡುವಿನ ಮುಂದುಗಡೆಗೆ ಇರಬೇಕು.

***ಅಗೌರವದ ಬಳಕೆ ಬೇಡ***

ಅಂದವಲ್ಲದ ಹಾಗೂ ಹಾಳಾದ ರಾಷ್ಟ್ರ ಪತಾಕೆಯ ಪ್ರದರ್ಶನವನ್ನು ಮಾಡಬಾರದು. ಪತಾಕೆಯನ್ನು ವ್ಯಕ್ತಿ ಇಲ್ಲವೆ ವಸ್ತುವಿಗೆ ವಂದನೆ ಮಾಡಲು ತಗ್ಗಿಸಿ ಹಿಡಿಯಬಾರದು. ರಾಷ್ಟ್ರ ಧ್ವಜದ ಮೇಲ್ಗಡೆಗೆ ಇಲ್ಲವೆ ಅದರ ಉತ್ತರಕ್ಕೆ ಇತರ ಪತಾಕೆಯನ್ನು



೧೯೪೭, ರಾಷ್ಟ್ರ ಪತಾಕೆ

ಇಲ್ಲವೆ ತೋರಣವನ್ನು ಪ್ರದರ್ಶಿಸಕೂಡದು. ರಾಷ್ಟ್ರಧ್ವಜವನ್ನು ಹಾರ, ತೋರಣ, ಅಲಂಕಾರ ಹಾಗೂ ಬೇರೆ ಬಾವುಟದ ಯಾವ ರೀತಿಯಲ್ಲೂ ಅಲಂಕಾರದ ಪ್ರದರ್ಶನಕ್ಕೆ ಬಳಸಬಾರದು. ರಾಷ್ಟ್ರ ಪತಾಕೆಯಂತೆ ಕಾಣಲು ಇತರ ಬಟ್ಟೆಯನ್ನು ಜೋಡಿಸಕೂಡದು.

ಕೇಸರಿ ಪಟ್ಟಿಯು ಕೆಳಗೆ ಇರುವಂತೆ ರಾಷ್ಟ್ರ ಪತಾಕೆಯನ್ನು ಪ್ರದರ್ಶಿಸಬಾರದು. ಪತಾಕೆಯನ್ನು ನೆಲ ಮುಟ್ಟಲು ಇಲ್ಲವೆ ನೀರಿನಲ್ಲಿ ತೊಯ್ಯಲು ಬಿಡಬಾರದು. ಭಾಷಣಕಾರರ ಮೇಜನ್ನು ಇಲ್ಲವೆ ವೇದಿಕೆಯನ್ನು ಮುಚ್ಚಲು ರಾಷ್ಟ್ರಪತಾಕೆಯನ್ನು ಬಳಸಬಾರದು. ಇದನ್ನು ಉಡಿಗೆ ತೊಡಿಗೆ ಇಲ್ಲವೆ ಸಮವಸ್ತ್ರದ ಭಾಗವಾಗಿ ಉಪಯೋಗಿಸಕೂಡದು. ಪತಾಕೆಯ ಮೇಲೆ ಯಾವುದೇ ಅಕ್ಷರ ಇಲ್ಲವೆ ಬರಹ ಬರೆಯಕೂಡದು. ಯಾವುದೇ ರೂಪದ ಜಾಹಿರಾತಿನಲ್ಲಿ ಇಲ್ಲವೆ ಪತಾಕೆ ಹಾರುತ್ತಿರುವ ಸ್ತಂಭವನ್ನು ಜಾಹಿರಾತಿನ ಸಂಕೇತವಾಗಿ ಬಳಸಬಾರದು. ಪತಾಕೆಯನ್ನು ಯಾವುದನ್ನಾದರೂ ಸ್ವೀಕರಿಸುವ, ಇಲ್ಲವೆ ಕೊಡುವ, ಹಿಡಿಯುವ, ಇಲ್ಲವೆ ಒಯ್ಯುವ ಕಾರ್ಯಕ್ಕೆ ಉಪಯೋಗಿಸಬಾರದು.

ಪತಾಕೆಯು ಹಾಳಾದ, ಇಲ್ಲವೆ ಕೊಳಕಾದ ಸ್ಥಿತಿಯಲ್ಲಿರುವಾಗ ಅದನ್ನು ದೂರ ಬಿಸಾಡಬಾರದು. ಇಲ್ಲವೆ ಅಗೌರವದ ರೀತಿಯಲ್ಲಿ ನಾಶ ಮಾಡಬಾರದು.,

ರಾಷ್ಟ್ರಧ್ವಜವನ್ನು ಗಣರಾಜ್ಯ ದಿನ, ಆ ನಂತರದ ರಾಷ್ಟ್ರೀಯ ಸಪ್ತಾಹ, ಸ್ವಾತಂತ್ರ್ಯ ದಿನ, ಮಹಾತ್ಮಾ ಗಾಂಧೀಜಿಯರ ಜನ್ಮ ದಿನ, ಇಲ್ಲವೆ ರಾಷ್ಟ್ರೀಯ ಸಂತೋಷದ ಇತರ ನಿರ್ದಿಷ್ಟ ದಿನ ಪ್ರದರ್ಶಿಸುವುದಕ್ಕೆ ಯಾವ ನಿರ್ಬಂಧವಿಲ್ಲ.

***ಗೌರವದ ರೀತಿ ನೀತಿ***

ಪತಾಕೆಯನ್ನು ಏರಿಸುವ ಇಲ್ಲವೆ ಇಳಿಸುವ ಸಮಾರಂಭದಲ್ಲಿ ಇಲ್ಲವೆ ಪತಾಕೆ ಸೇವಾ ಪ್ರದರ್ಶನದಲ್ಲಿ ದಾಟಿ ಹೋಗುತ್ತಿರುವಾಗ ಅಲ್ಲಿದ್ದವರೆಲ್ಲ ಪತಾಕೆಗೆ ಮುಖಮಾಡಿ ನೆಟ್ಟಗೆ ನಿಲ್ಲಬೇಕು. ಸಮವಸ್ತ್ರ ಧರಿಸಿದವರು ಸರಿಯಾಗಿ ವಂದನೆ ಮಾಡಬೇಕು. ಪತಾಕೆ ಸಾಗುತ್ತಿರುವ ಸಂದರ್ಭದಲ್ಲಿ ಅಲ್ಲಿದ್ದವರೆಲ್ಲ ನೆಟ್ಟಗೆ ನಿಲ್ಲಬೇಕು. ಪತಾಕೆ ಅವರನ್ನು ದಾಟಿ ಹೋಗುತ್ತಿರುವಾಗ ವಂದಿಸಬೇಕು. ತಲೆಯ ಮೇಲೆ ರುಮಾಲು ಇತ್ಯಾದಿ ಏನನ್ನೂ ಧರಿಸದೇ ವಂದನೆ ಸ್ವೀಕರಿಸಬಹುದು.

ರಾಷ್ಟ್ರ ಪತಾಕೆಯನ್ನು ಸರಕಾರದ ವಿಶೇಷ ಸೂಚನೆ ಇಲ್ಲದೆ ಸ್ತಂಭದ ಅರ್ಧಕ್ಕೆ ಹಾರಿಸಕೂಡದು. ಗಣರಾಜ್ಯದಿನ. ಸ್ವಾತಂತ್ರ್ಯದಿನ, ಮಹಾತ್ಮಾ ಗಾಂಧೀಜಿ ಜನ್ಮ ದಿನ ಇತ್ಯಾದಿ ಪತಾಕೆಯ ಪ್ರದರ್ಶನಕ್ಕೆ ನಿರ್ಬಂಧವಿಲ್ಲದ ದಿನವೂ; ಪತಾಕೆಯನ್ನು ಮರಣದ ನಿಮಿತ್ತ ಧ್ವಜಸ್ತಂಭದ ಅರ್ಧಕ್ಕೆ ಪ್ರದರ್ಶಿಸಬೇಕಾದ ದಿನವೂ ಒಂದೇ ಆದಲ್ಲಿ ಶವ ತೆಗೆದುಕೊಂಡ ಹೋಗುವವರೆಗೆ ಶವವನ್ನು ಮಲಗಿಸಿಟ್ಟ ಕಟ್ಟಡದ ಮೇಲೆ ಮಾತ್ರ ಪತಾಕೆಯನ್ನು ಕಂಬದ ಅರ್ಧಕ್ಕೆ ಪ್ರದರ್ಶಿಸಬಹುದಲ್ಲದೆ ಬೇರೆ ಯಾವ ಕಡೆಯೂ ಅರ್ಧಕ್ಕೆ ಪ್ರದರ್ಶಿಸಬಾರದು. ಶವವನ್ನು ಒಯ್ದ ಬಳಿಕ ಪತಾಕೆಯನ್ನು ಧ್ವಜದ ತುದಿಗೆ ಏರಿಸಬೇಕು.

ಸ್ತಂಭದ ಅರ್ಧಕ್ಕೆ ಪತಾಕೆಯನ್ನು ಹಾರಿಸುವಾಗ ಒಂದು ಕ್ಷಣ ಸ್ತಂಭದ ತುದಿಯಲ್ಲಿ ಹಾರಿಸಿ ಬಳಿಕ ಅರ್ಧಕ್ಕೆ ಇಳಿಸಬೇಕು. ದಿನದ ಕೊನೆಯಲ್ಲಿ ಪತಾಕೆಯನ್ನು ಇಳಿಸುವಾಗ ಮೊದಲು ಅದನ್ನು ತುದಿಗೆ ಏರಿಸಿ ನಂತರ ಕೆಳಗೆ ಇಳಿಸಬೇಕು.

ಸೇನೆ, ರಾಷ್ಟ್ರಾಧ್ಯಕ್ಷರು ಪತಾಕೆಯನ್ನು ಉಪಯೋಗಿಸಲು ಪ್ರತ್ಯೇಕ ಕ್ರಮಗಳನ್ನು ಸೂಚಿಸಲಾಗಿದೆ. ರಾಷ್ಟ್ರ ಪತಾಕೆಗೆ ನಿಷ್ಠೆಯ ಪ್ರತಿಜ್ಞೆ ಮಾಡುವಾಗ ಶಿಕ್ಷಣ ಸಂಸ್ಥೆಗಳಲ್ಲಿ ಅನುಸರಿಸುವ ಕ್ರಮ ಇಂತಿದೆ. ವಿದ್ಯಾರ್ಥಿಗಳು ಕೈಜೋಡಿಸಿ ಎದ್ದು ನಿಂತು. "ರಾಷ್ಟ್ರ ಪತಾಕೆಗೆ ಹಾಗೂ ಅದನ್ನು ಪ್ರತಿನಿಧಿಸುವ ಸರ್ವತಂತ್ರ ಪ್ರಜಾಪ್ರಭುತ್ವ ಗಣರಾಜ್ಯಕ್ಕೆ ನಿಷ್ಠೆಯಿಂದಿರುವೆನೆಂದು ಪ್ರತಿಜ್ಞೆ ಮಾಡುತ್ತೇನೆ ಎಂದು ಪ್ರತಿಜ್ಞೆಯನ್ನು ಎಲ್ಲರೂ ಉಚ್ಚರಿಸಬೇಕು.

ರಾಷ್ಟ್ರಧ್ವಜವನ್ನು ಸಾಮಾನ್ಯವಾಗಿ ವಿಧಾನಸೌಧ, ಹೈಕೋರ್ಟ್, ಕಮೀಶನ್‌ರರ ಕಛೇರಿ, ಜಿಲ್ಲಾಧಿಕಾರಿಗಳ ಕಛೇರಿ, ಜೈಲು ಮೊದಲಾದ ಕಚೇರಿ ಹಾಗೂ ಇತರ ಪ್ರಮುಖ ಕಟ್ಟಡಗಳ ಮೇಲೆ ಮಾತ್ರ ಪ್ರದರ್ಶಿಸಬೇಕು.

ರಾಷ್ಟ್ರದ ಗೌರವ ಸೂಚಕವಾದ ರಾಷ್ಟ್ರಧ್ವಜದ ಬಳಕೆ ಹಾಗೂ ಮಹತ್ವವನ್ನು ನಾಗರಿಕರೆಲ್ಲ ಅರಿತು ನಡೆಯುವುದು ಅತ್ಯಗತ್ಯವಾಗಿದೆ. ನಮ್ಮ ರಾಷ್ಟ್ರಪ್ರೇಮ ಹಾಗೂ ಅಭಿಮಾನದ ವೃದ್ಧಿಗೆ ಚೇತೋಹಾರಿಯಾಗಿದೆ.





# ಸ್ವಾತಂತ್ರ್ಯ ರಕ್ಷಣೆಯ ಕವಚ 'ಪ್ರಜಾತಂತ್ರ'

**-- ಕೋ. ಚೆನ್ನಬಸಪ್ಪ**
೧೨೭, ವೆಸ್ಟ್ ಆಫ್ ಕಾರ್ಡ್‌ರಸ್ತೆ,
ರಾಜಾಜಿನಗರ, ಬೆಂಗಳೂರು-೧೦

ಚೀನಾದಲ್ಲಿ ಕನ್‌ಫ್ಯೂಷಿಯಸ್ ಕಾಲದಿಂದಲೂ ಒಂದು ಕತೆ ಪ್ರಚಲಿತದಲ್ಲಿದೆ. ಒಂದು ಕಾಡಿನ ಮಾರ್ಗವಾಗಿ ಒಬ್ಬ ಸಂನ್ಯಾಸಿ ಹಾದು ಹೋಗುತ್ತಿದ್ದ. ಪಕ್ಕದ ಗುಡಿಸಲಿನಿಂದ ಒಂದು ರೋದನ ಕೇಳಿ ಬಂತು. ಸಂನ್ಯಾಸಿ ಅಲ್ಲಿಗೆ ಹೋಗಿ ನೋಡಿದ. ಹೆಂಗಸೊಬ್ಬಳು ಗೋಳಾಡುತ್ತಿದ್ದಳು. ಏನೆಂದು ವಿಚಾರಿಸಿದ. ಆಕೆ ಹೇಳಿದಳು - ಹುಲಿಯೊಂದು ತನ್ನ ಗಂಡನನ್ನು ಕೊಂದು ತಿಂದಿತು ಎಂದು. ಸಂನ್ಯಾಸಿ ಸಾಂತ್ವನದ ನಾಲ್ಕು ಮಾತುಗಳನ್ನು ಹೇಳಿ ಮುಂದೆ ನಡೆದ. ನಾಲ್ಕಾರು ತಿಂಗಳ ನಂತರ ಅದೇ ಮಾರ್ಗವಾಗಿ ಸಂನ್ಯಾಸಿ ಹಿಂದಿರುಗುತ್ತಿದ್ದ. ಮತ್ತೆ ಅದೇ ಸ್ಥಳದಲ್ಲಿ ಅದೇ ಹೆಂಗಸು ಗೋಳಾಡುತ್ತಿದ್ದುದು ಕೇಳಿಸಿತು. ಹೋಗಿ ವಿಚಾರಿಸಿದ.ಅದೇ ಹುಲಿ ಆಗ ತಾನೆ ತನ್ನ ಮಗನನ್ನು ಕೊಂದು ತಿಂದಿತು ಎಂದು ಹೇಳಿದಳು. ಸಂನ್ಯಾಸಿ, ತುಂಬಾ ವ್ಯಥೆಗೊಂಡ. ಮತ್ತೆ ಆಕೆಗೆ ಸಾಂತ್ವನ ಹೇಳಿ ಮುಂದೆ ನಡೆದ. ವರ್ಷ ಒಪ್ಪತ್ತಿನ ನಂತರ ಅದೇ ದಾರಿಗುಂಟ ಆ ಸಂನ್ಯಾಸಿ ಮತ್ತೆ ಬಂದ. ಮತ್ತೆ ಅದೇ ರೋದನ, ಏನೆಂದು ವಿಚಾರಿಸಿದ.

'ಸ್ವಾಮಿ, ಆ ಅನಿಷ್ಟ ಹುಲಿ ನನ್ನ ಮೊಮ್ಮಗನನ್ನು ಕೊಂದು ತಿಂದಿತು' ಎಂದಳು.

ಸಂನ್ಯಾಸಿಗೆ ಸ್ವಲ್ಪ ಅಸಮಾಧಾನವೇ ಆಯಿತು. ಸಿಟ್ಟಿನಿಂದ:

'ಆ ದುಷ್ಟಪ್ರಾಣಿ ಇದೆಯೆಂದು ಗೊತ್ತಿದ್ದೂ ಇಲ್ಲೇಕೆ ಉಳಿದೆ. ಅಲ್ಲಿ ಎಲ್ಲಿಯಾದರೂ ಒಂದು ಊರಿಗೆ ಹೋಗಿ ಬದುಕಿಕೊಳ್ಳಬಾರದಿತ್ತೆ?' ಎಂದ.

'ಹೋಗುತ್ತಿದ್ದೆ ಸ್ವಾಮಿ, ಆದರೆ......'

'ಆದರೆ ಏನು ಬಂತು?' ಆತನ ದನಿಯಲ್ಲಿ ಗಡುಸಿತ್ತು; ಕನಿಕರ ಇರಲಿಲ್ಲ.

'ಅಲ್ಲಿ ಸರ್ಕಾರವಿದೆ ಸ್ವಾಮಿ' ಎಂದಳಂತೆ.

ಈ ಕತೆ ಚೀನಾದಲ್ಲಿ ಅನಿರ್ಬಂಧ ನಿರಂಕುಶ ದೌರ್ಜನ್ಯಪೂರಿತ ಅರಸೊತ್ತಿಗೆಯ ಆಳ್ವಿಕೆಯನ್ನು ಕುರಿತು ಹುಟ್ಟಿದ್ದರೂ ಇದು ಜಗತ್ತಿನ ಎಲ್ಲ ಆಳ್ವಿಕೆಗಳಿಗೂ ಅಷ್ಟೇ ಸಮರ್ಪಕವಾಗಿ ಅನ್ವಯಿಸುತ್ತದೆ ಎಂದು ನಿರ್ವಿವಾದವಾಗಿ ಹೇಳಬಹುದು. ಭಾರತವೂ ಇದಕ್ಕೆ ಹೊರತಲ್ಲ ಎಂಬುದಕ್ಕೆ 'ರಾಮ ರಾಜ್ಯವಾಳಿದರೂ ರಾಗಿ ಬೀಸುವುದು ತಪ್ಪದು' ಎಂಬ ಕನ್ನಡ ಗಾದೆಯೇ ಸಾಕ್ಷಿ.

ತಮ್ಮ ಹಿತಾಸಕ್ತಿಗಳನ್ನು ಕಾಪಾಡಲೆಂದು ಸ್ಥಾಪಿಸಿದ ಸರ್ಕಾರವೇ ಪ್ರಜಾಪೀಡನೆಯ ಯಂತ್ರವಾಗುವ ಅಪಾಯ ಇಲ್ಲದೆ ಇಲ್ಲ. 'ಪ್ರಜೆಗಳೇ ತಮ್ಮನ್ನು ಪೀಡಿಸುವ ಯಂತ್ರವನ್ನು ತಾವೇ ರಚಿಸಿದಂತಾಗುತ್ತದೆ. ಟಾಮ್‌ಪೆಯಿನ್ ಹೇಳುವಂತೆ 'ಅತ್ಯುತ್ತಮ ಸ್ಥಿತಿಯಲ್ಲೂ ಸರ್ಕಾರ ಸಹಿಸಿಕೊಳ್ಳಲೇಬೇಕಾದ ಅನಿವಾರ್ಯ ಕೇಡು. ಅದರ ಅತ್ಯಂತ ಕೆಟ್ಟ ಸ್ಥಿತಿಯಲ್ಲಿ ಸಹಿಸಲಾಗದ ಪೀಡೆ.''

ಇಂಥ ಅಪಾಯದಿಂದ ಪ್ರಜೆಗಳು ಪಾರಾಗುವುದು ಹೇಗೆ?

ಆದ್ದರಿಂದ ಪ್ರಜೆಗಳು ಸದಾ ಜಾಗ್ರತರಾಗಿರುವುದೇ ತಮ್ಮ ಸ್ವಾತಂತ್ರವನ್ನು ರಕ್ಷಣೆ ಮಾಡುವ ಪ್ರಬಲ ರಕ್ಷಕ ಎಂಬ ತೀರ್ಮಾನಕ್ಕೆ ಬರಬೇಕಾಗುತ್ತದೆ. ಯಾವುದೇ ಸಂವಿಧಾನದತ್ತ ಮೂಲಭೂತ ಹಕ್ಕಾಗಲೀ ಇನ್ನಾವುದೇ ಪವಿತ್ರ ವ್ಯಕ್ತಿ ಸ್ವಾತಂತ್ರ್ಯವಾಗಲೀ ಆ ಸ್ವಾತಂತ್ರ್ಯವನ್ನು ಅನುಭೋಗಿಸುತ್ತೇವೆ, ಉಳಿಸಿಕೊಳ್ಳುತ್ತೇವೆ ಎಂಬ ದೃಢವಾದ ಸಂಕಲ್ಪವೇ ಅವುಗಳ ಉಪಯುಕ್ತತೆಯ ಆಧಾರ, ಪ್ರಜೆಗಳಿಗೆ ತಮ್ಮ ಹಕ್ಕುಗಳನ್ನು ಅನುಭವಿಸುವ ಕಾಪಾಡಿಕೊಳ್ಳುವ ದೃಢ ನಿರ್ಧಾರ ಛಲಗಾರಿಕೆ ಇಲ್ಲದಿದ್ದರೆ ಯಾವ ಸಂವಿಧಾನವೂ ಅವರನ್ನು ರಕ್ಷಿಸಲಾರದು. ಎಂಥ ಸುಂದರ ಸಂವಿಧಾನದ ಮೂಲಭೂತ ಹಕ್ಕುಗಳ ಘೋಷಣೆಯೂ ವ್ಯರ್ಥ. ಅದನ್ನೆ ಒಬ್ಬ ಪ್ರಖ್ಯಾತ ರಾಜನೀತಿಜ್ಞ "Eternal vigilence is the price Liberty" ಎಂಬ ಮಾತಿನಲ್ಲಿ ಹೇಳಿದ್ದಾನೆ. ಎಚ್ಚರ! ಎಚ್ಚರ! ಅದೇ ನಮ್ಮ ಸ್ವಾತಂತ್ರ್ಯ ರಕ್ಷಣೆಯ ತಾರಕಮಂತ್ರ!

(ಸೌಜನ್ಯ : ನೂರೊಂದು ಚಿಂತನ)

# ಶ್ರೀಶ್ರೀಗಳವರು ಭಾಗವಹಿಸಿದ ಸಮಾರಂಭಗಳ ಸಂಕ್ಷಿಪ್ತ ವರದಿ

## ಮಾನವೀಯತೆಯನ್ನು ಬೆಳೆಸಿಕೊಳ್ಳಲು ಶ್ರೀ ಶ್ರೀಗಳವರ ಕರೆ

ರಾಷ್ಟ್ರ ಸಂಕಷ್ಟಗಳನ್ನು ಎದುರಿಸುತ್ತಿರುವಾಗ, ಸಮಾಜ ದುಸ್ಥಿತಿಯಲ್ಲಿ ತೊಳಲಾಡುತ್ತಿರುವಾಗ, ಮನುಷ್ಯ ತನ್ನ ಮಾನವತ್ವವನ್ನೇ ಮರೆಯುತ್ತಿರುವ ಇಂತಹ ವಿಷಮ ಪರಿಸ್ಥಿತಿಯಲ್ಲಿ 'ವಚನಾಮೃತ ವರ್ಷಿಣಿಗಳು ಮಾತ್ರ ಎಲ್ಲವನ್ನು ಸಂತೈಸಿ ಸುಧಾರಿಸಬಲ್ಲವು' ಎಂದು ಪರಮಪೂಜ್ಯ ಡಾ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು ಕರೆನೀಡಿದರು. ಅವರು ಜುಲೈ ೧೯ರಂದು ಬೆಂಗಳೂರಿನಲ್ಲಿ ಏರ್ಪಡಿಸಿದ್ದ "ವಚನಾಮೃತ ವರ್ಷಿಣಿ" ಕಾರ್ಯಕ್ರಮವನ್ನು ಜ್ಯೋತಿ ಬೆಳಗಿಸುವುದರ ಮೂಲಕ ಉದ್ಘಾಟಿಸಿ ಆಶೀರ್ವಚನ ನೀಡಿದರು. "ಜನತೆಯಲ್ಲಿ, ಅದರಲ್ಲೂ ವಿಶೇಷವಾಗಿ ಮಕ್ಕಳಲ್ಲಿ ಬಸವಾದಿ ಪ್ರಮಥರ ಚಿಂತನೆ ಮೂಡಿಸುವ ಈ ಕಾರ್ಯ ಅತ್ಯಂತ ಪ್ರಶಂಶಾರ್ಹವೆಂದು" ನುಡಿದ ಪೂಜ್ಯರು 'ವಚನ ಜ್ಯೋತಿ' ಪತ್ರಿಕೆಯ ಸಂಸ್ಥಾಪಕರಾದ ಲಿಂಗೈಕ್ಯ ಪಂಡಿತ ಕೆ. ಪಿ. ಶಿವಲಿಂಗಯ್ಯನವರನ್ನು ನೆನೆದು ಅವರ ಸ್ಮರಣಾರ್ಥ 'ಶಿವಲಿಂಗ ಪ್ರಶಸ್ತಿ' ನೀಡುತ್ತಿರುವುದಕ್ಕೆ ತಮ್ಮ ಮೆಚ್ಚುಗೆ ವ್ಯಕ್ತ ಪಡಿಸಿದರು. ವಚನಜ್ಯೋತಿ ಪತ್ರಿಕೆ ನಾಡಿನಾದ್ಯಂತ ಮತ್ತಷ್ಟು ವ್ಯಾಪಕವಾಗಿ ಬೆಳೆಯಲಿ ಎಂದು ಆಶೀರ್ವದಿಸಿದರು.

ಪರಮಪೂಜ್ಯ ಶ್ರೀ ಶ್ರೀಗಳವರ ಸಾನಿಧ್ಯದಲ್ಲಿ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಶ್ರೀ ಗೊ.ರು. ಚನ್ನಬಸಪ್ಪ ಅವರು ಜ್ಯೋತಿ ಬೆಳಗುತ್ತಿರುವುದು. ಈ ಸಂದರ್ಭದಲ್ಲಿ ಶ್ರೀ ಟಿ.ಆರ್. ಮಹದೇವಯ್ಯ, ಶ್ರೀ ಪಿನಾಕಪಾಣಿ ಮೊದಲಾದವರು ಉಪಸ್ಥಿತರಿದ್ದರು

ಉದ್ಘಾಟನಾ ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಗೊ. ರು. ಚನ್ನಬಸಪ್ಪನವರು ಮಕ್ಕಳು ಅಧಿಕ ಸಂಖ್ಯೆಯಲ್ಲಿ ನೆರೆದಿರುವುದಕ್ಕೆ ತಮ್ಮ ಅತೀವ ಹರ್ಷ ವ್ಯಕ್ತಪಡಿಸಿದರು. ನೂರು ವಚನಗಳನ್ನು ಅಭ್ಯಸಿಸಿ ಹೇಳಿದವರಿಗೆ ಒಂದು ಸಹಸ್ರ ರೂಗಳ ಬಹುಮಾನವನ್ನು ಈ ಸಂದರ್ಭದಲ್ಲಿ ಘೋಷಿಸಿದರು. ನಾಡಿನೆಲ್ಲೆಡೆ ಇಂತಹ ಕಾರ್ಯಕ್ರಮಗಳು ಜರುಗಬೇಕೆಂದು ಆಶಿಸಿ 'ವಚನ ಜ್ಯೋತಿ ಬಳಗ'ದ ಸಾಹಸವನ್ನು ಮುಕ್ತಕಂಠದಿಂದ ಪ್ರಶಂಶಿಸಿದರು.

ಶ್ರೀ ನಟರಾಜ ಬ್ಯಾಲಕೆರೆ ಅವರ ವಚನ ಗಾಯನದೊಂದಿಗೆ ಕಾರ್ಯಕ್ರಮ ಪ್ರಾರಂಭವಾಯಿತು. "ವಚನಜ್ಯೋತಿ" ಪತ್ರಿಕೆಯ ಸಂಪಾದಕ ಶ್ರೀ ಪಿನಾಕಪಾಣಿ ಸ್ವಾಗತಿಸಿದರು. ವಚನಜ್ಯೋತಿ ಬಳಗದ ಅಧ್ಯಕ್ಷರಾದ ಶ್ರೀ ಟಿ. ಆರ್. ಮಹಾದೇವಯ್ಯನವರ ಪ್ರಾಸ್ತಾವಿಕ ಭಾಷಣ ಮಾಡಿದರು.

ನಂತರ ನಡೆದ ಸಮಾರೋಪ ಸಮಾರಂಭದಲ್ಲಿ ಕನ್ನಡ ಮತ್ತು ಸಂಸ್ಕೃತಿ ಸಚಿವೆ ಶ್ರೀಮತಿ ಲೀಲಾದೇವಿ ಆರ್. ಪ್ರಸಾದ್ ಅವರು ಪ್ರಸಕ್ತ ಸಾಲಿನ "ಶಿವಲಿಂಗ ಪ್ರಶಸ್ತಿ"ಯನ್ನು ಹಿರಿಯ ಸ್ವಾತಂತ್ರ್ಯ ಹೋರಾಟಗಾರ ಹಾಗೂ ಲೋಕದರ್ಶನ ಪತ್ರಿಕೆಯ ಸಂಪಾದಕ ಶ್ರೀ ಎಂ. ಬಿ. ದೇಸಾಯಿ ಅವರಿಗೆ ವಿತರಿಸಿದರು. ಇದೇ ಸಂದರ್ಭದಲ್ಲಿ "ವಚನಜ್ಯೋತಿ" ವಿಶೇಷಾಂಕವನ್ನು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ಪ್ರೊ. ಚಂದ್ರಶೇಖರ ಪಾಟೀಲ ಅವರು ಬಿಡುಗಡೆ ಮಾಡಿದರು. 'ವಚನಾಮೃತವರ್ಷಿಣಿ' ಸ್ಪರ್ಧೆಯ ವಿಜೇತರಿಗೆ ಬಹುಮಾನಗಳನ್ನು ಪ್ರೊ. ಎಂ. ಸಿ. ಶಾಂತಮೂರ್ತಿ ಅವರು ವಿತರಿಸಿದರು. ಶ್ರೀ ಬಿ. ಟಿ. ಉಮೇಶ್ ಹಾಗೂ ಶ್ರೀ ಬಿ. ಎಸ್. ಶಿವಣ್ಣ ಅವರು "ಪ್ರತಿಭಾ ಪುರಸ್ಕಾರ"ವನ್ನು ಪ್ರದಾನ ಮಾಡಿದರು. ಶ್ರೀ ಶಿವಗಂಗಾ ಕ್ಷೇತ್ರದ ಶ್ರೀ ಶ್ರೀ ಮಲಯ ಶಾಂತಮುನಿ ಶಿವಾಚಾರ್ಯ ಸ್ವಾಮಿಗಳು ಆಶೀರ್ವಚನ ನೀಡಿದರು.





# ಬಸವಣ್ಣನವರ ಕಾಯಕ ತತ್ತ್ವವನ್ನು ಅನುಸರಿಸಲು ಕರೆ

"ಯಾವ ಪ್ರಜಾಪ್ರಭುತ್ವದಲ್ಲಿ ಕ್ರಿಯಾ ಶೀಲತೆ ಇರುವುದಿಲ್ಲವೋ ಅಲ್ಲಿ ಸಮೃದ್ಧಪರ ನಾಯಕನ ಆಯ್ಕೆಯೂ ಸಹ ನ್ಯೂನತೆಗಳಿಂದ ಕೂಡಿರುತ್ತದೆ. ಆದ್ದರಿಂದ ಸಮಾಜವು ಬಸವಣ್ಣನವರ ಕಾಯಕ ಸಿದ್ಧಾಂತವನ್ನು ಅನುಸರಿಸಿ ನಡೆದುಕೊಳ್ಳುವಲ್ಲಿ ಮುಂದಾಗಬೇಕೆಂದು" ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಯವರು ನುಡಿದರು.

ಅವರು ಆಗಸ್ಟ್ ೫ರಂದು ಕೊರಟಗೆರೆಯಲ್ಲಿ ನೂತನವಾಗಿ ನಿರ್ಮಿಸಿರುವ ಶ್ರೀ ಬಸವೇಶ್ವರ ದೇವಸ್ಥಾನದ ಬಸವೇಶ್ವರ, ಈಶ್ವರ ಪಾರ್ವತಿ, ಗಣೇಶ ಮತ್ತು ಸುಬ್ರಹ್ಮಣ್ಯ ಮೂರ್ತಿ ಪ್ರತಿಷ್ಠಾಪನಾ ಸಂದರ್ಭದಲ್ಲಿ ಆಶೀರ್ವಚನ ನೀಡಿದರು.

"ವಿಜ್ಞಾನವು ಮಾನವನಿಗೆ ಅನೇಕ ಸೌಲಭ್ಯಗಳನ್ನು ನೀಡಿದ್ದರೂ ಪ್ರಜಾಪ್ರಭುತ್ವವು ಸಮೃದ್ಧಿಸ್ವಚ್ಛಂದ ಶಿಸ್ತಿನ ಜೀವನವನ್ನು ಸಮಾಜಕ್ಕೆ ಒದಗಿಸಿದೆ. ಬಸವಣ್ಣನವರ ಪ್ರಜಾಪ್ರಭುತ್ವದಲ್ಲಿ ಸಮೃದ್ಧಿ ಕಾಣಬೇಕಾದರೆ ದುಡಿದು ಉಣ್ಣುವುದು ಕಡ್ಡಾಯವಾಗಬೇಕು. ಕಾಯಕ ತತ್ತ್ವವನ್ನು ಸರ್ಕಾರೀಕರಣ ಗೊಳಿಸಬೇಕು" ಎಂಬುದನ್ನು ಹೇಳಿದ್ದಾನೆ ಎಂದರು.

ಶ್ರೀ ಶ್ರೀಗಳವರಿಂದ ಆಶೀರ್ವಚನ. ಈ ಸಂದರ್ಭದಲ್ಲಿ ಶ್ರೀ ವೈ. ಎಸ್. ಸದಾಶಿವಯ್ಯ, ಮಾಜಿ ಶಾಸಕ ಶ್ರೀ ಸಿ. ವೀರಭದ್ರಯ್ಯ, ತುಮಕೂರು ಹಿರೇಮಠದ ಡಾ. ಶಿವಾನಂದ ಶಿವಾಚಾರ್ಯ ಸ್ವಾಮಿಗಳು, ಶ್ರೀ ವಿಶ್ವೇಶ್ವರಯ್ಯ, ಶ್ರೀ ಹ. ಬ. ಮಹದೇವಪ್ಪ ಹಾಗೂ ಶ್ರೀ ಹೆಚ್. ವಿ. ವೀರಭದ್ರಯ್ಯ ಅವರು ಉಪಸ್ಥಿತರಿದ್ದರು.

ಸಮಾರಂಭವನ್ನು ಉದ್ಘಾಟಿಸಿದ ತುಮಕೂರು ಹಿರೇಮಠದ ಡಾ. ಶ್ರೀ ಶ್ರೀ ಶಿವಾನಂದ ಶಿವಾಚಾರ್ಯ ಮಹಾಸ್ವಾಮಿಯವರು ಸ್ಥಳೀಯ ವೀರಶೈವ ಸಮಾಜ ಬಾಂಧವರ ಉತ್ಸಾಹ, ಗುರುಪರಂಪರೆಯಲ್ಲಿರುವ ಭಕ್ತಿ ಶ್ರದ್ಧೆಗಳನ್ನು ಶ್ಲಾಘಿಸಿ "ದೇವಾಲಯಗಳು ಕೇವಲ ಮೂರ್ತಿ ಪೂಜೆಯ ಕೇಂದ್ರಗಳಾಗದೆ ಜನ ಸಂಘಟನೆ; ಸಾಂಸ್ಕೃತಿಕ ಚಟುವಟಿಕೆ, ಸಾಮಾಜಿಕ ನ್ಯಾಯ ತೀರ್ಮಾನಗಳ ಕೇಂದ್ರಗಳಾಗಬೇಕು" ಎಂದು ಅಭಿಪ್ರಾಯ ಪಟ್ಟರು.

ನಿವೃತ್ತ ಕನ್ನಡ ಪ್ರಾಧ್ಯಾಪಕ ಶ್ರೀ ಹೆಚ್. ವಿ. ವೀರಭದ್ರಯ್ಯ ಅವರು ಮಾತನಾಡಿ, "ಈ ಸಮಾಜಕ್ಕೆ ಶಿವಶರಣೆಯರ ಕೊಡುಗೆ ಅಮೂಲ್ಯವಾದದ್ದು. ಉತ್ತಮ ಸಮಾಜ ನಿರ್ಮಾಣಕ್ಕೆ ಮಹಿಳೆಯರ ಪಾತ್ರ ಅತ್ಯವಶ್ಯಕ ಎಂಬ ಅಂಶವನ್ನು ೧೨ನೇ ಶತಮಾನದಲ್ಲೇ ಬಸವಣ್ಣನವರು ತಿಳಿಸಿದ್ದಾರೆಂದು" ಹೇಳಿದರು.

ಜಿಲ್ಲಾ ವೀರಶೈವ ಸಮಿತಿಯ ಅಧ್ಯಕ್ಷ ಹಾಗೂ ಮಾಜಿ ಶಾಸಕ ಶ್ರೀ ಸಿ. ವೀರಭದ್ರಯ್ಯನವರು ಈ ಸಂದರ್ಭದಲ್ಲಿ ಉಪಸ್ಥಿತರಿದ್ದರು. ಡಾ. ಕೆ. ಆರ್.ಶುಭಾ ಹಾಗೂ ಶಿಕ್ಷಕ ಶ್ರೀ ಜಯಕುಮಾರ್ ಅವರು ವಚನಗಳನ್ನು ವಾಚಿಸಿದರು. ಶ್ರೀ ವೈ. ಎಸ್. ಸದಾಶಿವಯ್ಯನವರು ಸ್ವಾಗತಿಸಿದರು. ಶ್ರೀ ಕೆ. ಪಿ. ರಾಜಣ್ಣನವರು ವಂದಿಸಿದರು. ಶ್ರೀ ಸಿದ್ಧಗಿರಿ ನಂಜುಂಡಸ್ವಾಮಿ ಕಾರ್ಯಕ್ರಮ ನಿರೂಪಿಸಿದರು.

# 'ಶಿಕ್ಷಣ ಸೌಲಭ್ಯದ ಸದ್ಬಳಕೆ ಮಾಡಿಕೊಳ್ಳಿ'

- ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು



ಪರಮಪೂಜ್ಯ ಶ್ರೀ ಶ್ರೀಗಳವರಿಂದ ಜ್ಯೋತಿ ಬೆಳಗಿಸುವುದರ ಮೂಲಕ ಕಾರ್ಯಕ್ರಮದ ಉದ್ಘಾಟನೆ. ಈ ಸಂದರ್ಭವಲ್ಲಿ ಕೋಡಿಹಳ್ಳಿ ಆದಿಜಾಂಬವ ಜಗದ್ಗುರು ಶ್ರೀ ಶ್ರೀ ರುದ್ರಾಕ್ಷಿ ದೇಶೀಕೇಂದ್ರ ಸ್ವಾಮಿಗಳು, ಶಾಸಕ ಶ್ರೀ ಸಿ. ಚೆನ್ನಿಗಪ್ಪ, ಶ್ರೀ ಚಿಕ್ಕರಂಗಯ್ಯ ಮೊದಲಾದವರು ಉಪಸ್ಥಿತರಿದ್ದರು.

'ಆದಿಜಾಂಬವ ಜನಾಂಗದಲ್ಲಿ ಎಲ್ಲರೂ ಸಾಕ್ಷರರಾಗಬೇಕು. ಸರ್ಕಾರದ ಸವಲತ್ತುಗಳನ್ನು ಸದ್ಬಳಕೆ ಮಾಡಿಕೊಳ್ಳುವ ಮೂಲಕ ಆರ್ಥಿಕ ಮಟ್ಟ ಹೆಚ್ಚಿಸಿಕೊಳ್ಳಬೇಕೆಂದು' ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು ಕರೆಯಿತ್ತರು. ಅವರು ಕೊರಟಗೆರೆಯಲ್ಲಿ ಇತ್ತೀಚಿಗೆ ನಡೆದ ವಿಭಾಗೀಯ ಮಟ್ಟದ ಆದಿಜಾಂಬವ ಮಹಾ ಸಮ್ಮೇಳನ ಉದ್ಘಾಟಿಸಿ ಮಾತನಾಡುತ್ತಿದ್ದರು.

ಮೂಢ ನಂಬಿಕೆಗಳನ್ನು ಕೈಬಿಟ್ಟು ಪ್ರಗತಿ ಹೊಂದಲು ಮುಂದಾಗಬೇಕೆಂದ ಶ್ರೀಗಳು, ಸರ್ಕಾರದ ಸೌಲಭ್ಯಗಳು ಅನಕ್ಷರತೆಯ ಕಾರಣದಿಂದ ಜನ ಸಾಮಾನ್ಯರಿಗೆ ತಲುಪುತ್ತಿಲ್ಲ ಎಂದು ವಿಷಾದಿಸಿದರು.

ಅರಣ್ಯ ಸಚಿವ ಶ್ರೀ ಡಿ. ಮಂಜುನಾಥ್ ಅವರು ಮಾತನಾಡಿ, "ಜನಾಂಗವು ಸಂಘಟಿತವಾದರೆ ಸೌಲಭ್ಯಗಳನ್ನು ಪಡೆದುಕೊಳ್ಳುವುದು ಸುಲಭವಾಗುತ್ತದೆ" ಎಂದು ಹೇಳಿದರು. ವಿಧಾನ ಪರಿಷತ್ ಸದಸ್ಯ ಹಾಗೂ ಮಾಜಿ ಸಚಿವ ಶ್ರೀ ಕೆ. ಬಿ. ಶಾಣಪ್ಪ ಅವರು ಮಾತನಾಡಿ, "ನಮ್ಮ ಬೇಡಿಕೆಗಳನ್ನು ನಾವೇ ಈಡೇರಿಸಿಕೊಂಡು ಸ್ವಾಭಿಮಾನಿಗಳಾಗಬೇಕು. ಜನಾಂಗದ ಹಿತಕ್ಕಾಗಿ ದುಡಿಯಬೇಕು. ಉತ್ತಮ ಬಡ ವಿದ್ಯಾರ್ಥಿಗಳಿಗೆ ಪ್ರೋತ್ಸಾಹ ನೀಡಬೇಕೆಂದು" ಹೇಳಿದರು. ಅಧ್ಯಕ್ಷತೆ ವಹಿಸಿದ್ದ ಶಾಸಕ ಶ್ರೀ ಸಿ. ಚೆನ್ನಿಗಪ್ಪ ಅವರು ಮಾತನಾಡಿ.





ಮುಖಂಡರು ಹಿಂದುಳಿದ ಜನಾಂಗದ ಏಳಿಗೆಗೆ ಶ್ರಮಿಸಬೇಕೆಂದರು. ಸನ್ಮಾನಿತರಾದ ಜಿಲ್ಲಾ ಪಂಚಾಯಿತಿ ಅಧ್ಯಕ್ಷೆ ಶ್ರೀಮತಿ ಕಮಲ ಗಂಗಹನುಮಯ್ಯ ಹಾಗೂ ಧಾರವಾಡದ ವಿಧಾನ ಪರಿಷತ್ ಸದಸ್ಯ ಶ್ರೀ ಹನುಮಂತಪ್ಪ ಅಲ್ಕೋಡ್ ಮಾತನಾಡಿದರು.

ಮೈಸೂರು ಉಪಮೇಯರ್ ಶ್ರೀ ಕೃಷ್ಣ ಅವರ 'ಆದಿಜಾಂಬವರ ಸಂಖ್ಯೆ ಅತ್ಯಧಿಕವಾಗಿದ್ದರೂ, ಜನಾಂಗದ ಪ್ರಗತಿ ಕುಂಠಿತವಾಗಿದೆ'ಯೆಂದು ವಿಷಾದಿಸಿದರು. ವಿಶೇಷ ಆಹ್ವಾನಿತರಾಗಿದ್ದ ಮೈಸೂರು ವಿ.ವಿ.ಯ ಪ್ರೊ. ಓ. ಅನಂತರಾಮಯ್ಯನವರು ಜನಾಂಗದ ಇತಿಹಾಸವನ್ನು ವಿವರಿಸಿದರು. ಪಟ್ಟಣ ಪಂಚಾಯಿತ್ತಿ ಅಧ್ಯಕ್ಷ ಶ್ರೀ ಎ.ಡಿ. ಬಲರಾಮಯ್ಯ ಮಾತನಾಡಿದರು. ತಾಲ್ಲೂಕು ಆದಿಜಾಂಬವ ಸಂಘದ ಅಧ್ಯಕ್ಷ ಶ್ರೀ ಎನ್. ಚಿಕ್ಕರಂಗಯ್ಯ ಅವರು ಈ ಸಮಾರಂಭದಲ್ಲಿ ಉಪಸ್ಥಿತರಿದ್ದರು. ಹಿರಿಯೂರು ಕೋಡಿಹಳ್ಳಿ ಮಠದ ಆದಿಜಾಂಬವ ಜಗದ್ಗುರು ಶ್ರೀ ರುದ್ರಾಕ್ಷಿ ಮುನಿ ದೇಶೀಕೇಂದ್ರ ಮಹಾಸ್ವಾಮಿಗಳು, ಕಡಪ ಕೊಂಕೆಲ್ ಮಠದ ಶ್ರೀ ಸಾಮದೇವ ಮುನಿ ಶಿವಾಚಾರ್ಯ ಸ್ವಾಮಿಗಳು ಆಶೀರ್ವಚನ ನೀಡಿದರು. ●



ಶ್ರೀ ಶಿವಗಂಗಾ ಕ್ಷೇತ್ರದಲ್ಲಿ ಜೀರ್ಣೋದ್ಧಾರಗೊಂಡಿರುವ ಶ್ರೀ ರಾಚೋಟಿ ವೀರಭದ್ರಸ್ವಾಮಿ ದೇವಾಲಯದ ಸಂಪ್ರೋಕ್ಷಣಾ ಮಹೋತ್ಸವದ ಅಂಗವಾಗಿ ಜುಲೈ ೨೬ರಂದು ನಡೆದ ಧಾರ್ಮಿಕ ಸಮಾರಂಭದಲ್ಲಿ ಪರಮ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು, ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶೀಕೇಂದ್ರ ಮಹಾಸ್ವಾಮಿಗಳು ಶ್ರೀ ಸುತ್ತೂರು ಕ್ಷೇತ್ರ, ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳು ದೇಗುಲ ಮಠ, ಶ್ರೀ ಶ್ರೀ ಸಿದ್ಧಲಿಂಗ ಶಿವಾಚಾರ್ಯ ಸ್ವಾಮಿಗಳು ಹೊನ್ನಮ್ಮ ಗವಿ ಸಂಸ್ಥಾನ ಮಠ, ಮರಳೆ ಗವಿಮಠದ ಶ್ರೀ ಶ್ರೀ ಕಾಲಾಗ್ನಿ ರುದ್ರಮುನಿ ಮಹಾಸ್ವಾಮಿಗಳು, ಹಿರೇಮಠದ ಡಾ. ಶ್ರೀ ಶ್ರೀ ಶಿವಾನಂದ ಶಿವಾಚಾರ್ಯ ಸ್ವಾಮಿಗಳು, ಮೇಲಣ ಗವಿಮಠದ ಪಟ್ಟದ ಶ್ರೀ ಶ್ರೀ ಮಲಯ ಶಾಂತಮುನಿ ದೇಶೀಕೇಂದ್ರ ಶಿವಾಚಾರ್ಯ ಸ್ವಾಮಿಗಳು ಭಾಗವಹಿಸಿದ್ದರು.

## ಶ್ರೀ ಕ್ಷೇತ್ರಕ್ಕೆ ಸಿಂಗಪುರದ ಮಿಂಗ್ ದಾಹೂ ಸಾಂಸ್ಕೃತಿಕ ಸಂಘದ ಸದಸ್ಯರ ಭೇಟಿ

ಆಗಸ್ಟ್ ೮ರಂದು ಸಿಂಗಪುರದ ಮಿಂಗ್ ದಾಹೂ ಸಾಂಸ್ಕೃತಿಕ ಸಂಘದ ತಂಡದವರು ಶ್ರೀ ಕ್ಷೇತ್ರಕ್ಕೆ ಭೇಟಿ ನೀಡಿ ಶ್ರೀ ಕ್ಷೇತ್ರಾಧ್ಯಕ್ಷರಾದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದರ್ಶನಾಶೀರ್ವಾದ ಪಡೆದರು. (ಮುಖಪುಟ ಚಿತ್ರನೋಡಿ) ತಂಡದಲ್ಲಿ ಸಿಂಗಪುರದ ಶ್ರೀ ತಾನ್‌ತ್ಯಾಂಗ್ ತೆಂಗ್, ಶ್ರೀ ಚಾಂಗ್ ಕಿಮ್ ಸಿಯಾಂಗ್, ಥೈವಾನ್‌ನ ಶ್ರೀ ಹೊ ಯಿಂಗ್ ಮಿ, ಶ್ರೀಮತಿ ಚೆನ್ ಥೈ ಜೆನ್, ಮಲೇಷಿಯಾದ ಕುಮಾರಿ ಚೊಂಗ್ ಹೂಯಿ ಜಿಯೂನ್ ಅವರಿದ್ದರು. ಪರಮಪೂಜ್ಯ ಶ್ರೀಗಳವರ ವ್ಯಕ್ತಿತ್ವ ಕಾರ್ಯಸಾಧನೆ, ಪ್ರತಿನಿತ್ಯ ನಡೆಯುವ ಸಾವಿರಾರು ವಿದ್ಯಾರ್ಥಿಗಳ ಸಮೂಹ, ಸಾಮೂಹಿಕ ಪ್ರಾರ್ಥನೆ, ಸಾಮೂಹಿಕ, ಭೋಜನ ಹಾಗೂ ಶ್ರೀ ಕ್ಷೇತ್ರದ ಸುಂದರ ಪರಿಸರವನ್ನು ನೋಡಿ ಆನಂದಿಸಿ ವಿಶ್ವದ ಅತ್ಯಂತ ಅಪರೂಪವಾದ ಧಾರ್ಮಿಕ ಸಂಸ್ಥೆ ಎಂದು ಹೃದಯ ತುಂಬಿ ನುಡಿದರು.

ಪ್ರತಿಯೊಂದು ಶಾಲಾ ತರಗತಿಗೆ ಭೇಟಿ ನೀಡಿ ಧ್ಯಾನ, ಪ್ರಾರ್ಥನೆಗಳನ್ನು ಮಾಡಿಸುವ ಮೂಲಕ ಪ್ರಾರ್ಥನೆಯ ಮಹತ್ವವನ್ನು ಹಾಗೂ ಬುದ್ಧನ ಸಂದೇಶವನ್ನು ಮಕ್ಕಳಿಗೆ ಬುದ್ಧನ ಅನುಯಾಯಿಗಳಾದ ಈ ತಂಡದ ಸದಸ್ಯರು ಮನವರಿಕೆ ಮಾಡಿಕೊಟ್ಟರು.

ಪ್ರತಿನಿತ್ಯ ಏಕಾಗ್ರಚಿತ್ತದಿಂದ ಧ್ಯಾನ ಮಾಡಿದರೆ ಆತ್ಮಶಕ್ತಿಯನ್ನು ಗಳಿಸಬಹುದು. ಶಾಂತಿ, ನೆಮ್ಮದಿ, ಸಂತೋಷಗಳನ್ನು ಪಡೆಯಲು, ಭೌದ್ಧಿಕ ಹಾಗೂ ಮಾನಸಿಕ ಬೆಳವಣಿಗೆಗೆ ಧ್ಯಾನವೊಂದೆ ಪರಿಹಾರ ಮಾರ್ಗ ಎಂದು ಪ್ರಪಂಚಾದ್ಯಂತ ಅಣ್ವಸ್ತ್ರ ಪ್ರಸರಣದಿಂದ ಜರ್ಜರಿತವಾಗಿರುವ ಇಂದಿನ ಕಲುಷಿತವಾತವಾರಣ ತಿಳಿಯಬೇಕಾದರೆ ಬುದ್ಧನ ಶಾಂತಿ, ಅಹಿಂಸೆ, ಸತ್ಯಮಾರ್ಗಗಳನ್ನು ಅನುಸರಿಸುವುದರಿಂದ ಶಾಂತಿಯ ವಾತವಾದರೂ ಉಂಟು ಮಾಡಲು ಸಾಧ್ಯ ಎಂದು ತಿಳಿಸಿದರು.

## ಸಂಯುಕ್ತ ವಿದ್ಯಾರ್ಥಿ ಸಂಘದ ಉದ್ಘಾಟನೆ

"ಜ್ಞಾನಾರ್ಜನೆ ಶಿಕ್ಷಣದ ಗುರಿ ಶ್ರಮವಹಿಸಿ ವ್ಯಾಸಂಗ ಮಾಡದೆ ಹೋದರೆ ಉತ್ತಮ ಭವಿಷ್ಯವಿಲ್ಲ" ಎಂದು ಪರಮ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ನುಡಿದರು.

ಅವರು ದಿ. ೬-೮-೧೯೯೮ರಂದು ಶ್ರೀಮಠದಲ್ಲಿ ಸಂಯುಕ್ತ ವಿದ್ಯಾರ್ಥಿ ಸಂಘದ ಉದ್ಘಾಟನಾ ಸಮಾರಂಭದ ದಿವ್ಯ ಸಾನಿಧ್ಯವಹಿಸಿ ಮಾತನಾಡುತ್ತಿದ್ದ ಶ್ರೀಗಳು 'ನಮ್ಮ ಸ್ಥಾನಮಾನ, ಸಾಧನೆ ಚಿಂತನೆ ಮಾಡಿದರೆ ನಿರಾಶೆ ಉಂಟಾಗುತ್ತದೆ. ನೈತಿಕ ಪತನ, ಸ್ವಾರ್ಥಪರತೆ, ಆಲಸ್ಯ, ಸೋಮಾರಿತನ, ಶೋಷಣೆ ಸಮಾಜವನ್ನು ದುರ್ಬಲಗೊಳಿಸಿದೆ. ಭರತ ಖಂಡದ ಭವ್ಯ ಪರಂಪರೆ ಕಣ್ಮರೆಯಾಗುತ್ತಿದೆ. ಶ್ರಮವಹಿಸಿ ದುಡಿಯುವ ಮನೋಭಾವ ಬೆಳೆಸಿಕೊಳ್ಳಬೇಕು' ಎಂದು ಆಶಿಸಿದರು.

ತುಮಕೂರು ಜಿಲ್ಲಾ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕ ಶ್ರೀ ಹೆಚ್. ಸಿ. ನಾಗರಾಜ್‌ರವರು ಸಮಾರಂಭವನ್ನು ಉದ್ಘಾಟಿಸಿದರು.

ಜಿಲ್ಲಾಧಿಕಾರಿಗಳ ಕಛೇರಿಯ ಕೇಂದ್ರ ಸ್ಥಾನಿಕ ಸಹಾಯಕರಾದ ಶ್ರೀ ಎನ್. ಆರ್. ಸುಬ್ಬರಾವ್ ಸಮಾರಂಭದ ಅಧ್ಯಕ್ಷತೆ ವಹಿಸಿದರು. ಶ್ರೀ ಬಸವೇಶ್ವರ ಶಿಕ್ಷಕ ತರಬೇತಿ ಸಂಸ್ಥೆಯ ಅಧೀಕ್ಷಕರಾದ ಶ್ರೀ ಎಸ್. ಶಿವಕುಮಾರ್ ಸ್ವಾಗತಿಸಿದರು. ಶ್ರೀ ಜಿ. ಹೆಚ್. ಗಂಗಾಧರಯ್ಯನವರು ಕಾರ್ಯಕ್ರಮ ನಿರೂಪಿಸಿದರು.

## ಆರೋಗ್ಯ ತಪಾಸಣ ಶಿಬಿರ

ತುಮಕೂರಿನ ಶ್ರೀ ಸಿದ್ಧಾರ್ಥ ವೈದ್ಯಕೀಯ ಕಾಲೇಜಿನ ವೈದ್ಯರು ಹಾಗೂ ವಿದ್ಯಾರ್ಥಿಗಳಿಂದ ಉಚಿತ ಆರೋಗ್ಯ ತಪಾಸಣ ಕಾರ್ಯ ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ದಿ ೧-೮-೧೯೯೮ರಿಂದ ೧೦-೮-೧೯೯೮ರ ವರೆಗೆ ನಡೆಯಿತು. ಶ್ರೀ ಕ್ಷೇತ್ರದಲ್ಲಿರುವ ಹಿರಿಯ ಪ್ರಾಥಮಿಕ ಪಾಠಶಾಲೆ, ಪ್ರೌಢಶಾಲಾ ವಿದ್ಯಾರ್ಥಿಗಳಲ್ಲಿರುವ ದಂತ, ಚರ್ಮ ಮೊದಲಾದ ರೋಗಗಳಿಗೆ ಸಂಬಂಧಪಟ್ಟಂತೆ ತಪಾಸಣೆ ಮಾಡಿ ಸೂಕ್ತ ಚಿಕಿತ್ಸೆ ನೀಡಿದರು.





## ಪರಿಸರ ಜಾಗೃತಿ ದಿನ

ಜುಲೈ ೧೭ರಂದು ಶ್ರೀ ಕ್ಷೇತ್ರದ ಶ್ರೀ ಸಿದ್ಧಲಿಂಗೇಶ್ವರ ಸನಿವಾಸ ಪ್ರೌಢಶಾಲೆಯಲ್ಲಿ ಮುಖ್ಯಶಿಕ್ಷಕರಾದ ಶ್ರೀ ಬಿ. ಎಸ್. ಬಸವರಾಜುರವರ ಅಧ್ಯಕ್ಷತೆಯಲ್ಲಿ ಪರಿಸರ ಜಾಗೃತಿ ದಿನವನ್ನು ಆಚರಿಸಲಾಯಿತು. ವಾಯುಮಾಲಿನ್ಯ, ಜಲಮಾಲಿನ್ಯಗಳಿಂದ ಜೀವರಾಶಿ ತತ್ತರಿಸಿ ಉಸಿರು ಕಟ್ಟಿ ಸಾಯುವ ಸ್ಥಿತಿಯಲ್ಲಿ ಇರುವ ಪ್ರಸಕ್ತ ಸನ್ನಿವೇಶದಲ್ಲಿ "ಗಿಡಮರಗಳನ್ನು ಬೆಳೆಸುವುದೊಂದೆ ಮಾರ್ಗ ಜೀವರಾಶಿಗಳ ಉಳುವಿಗಾಗಿ" ಎಂಬ ಘೋಷಣೆಯೊಂದಿಗೆ ಮಕ್ಕಳು ಮತ್ತು ಉಪಾಧ್ಯಾಯರು ಸಸಿಗಳನ್ನು ನೆಡುವುದರ ಮೂಲಕ ಪರಿಸರ ಜಾಗೃತಿ ದಿನವನ್ನು ಆಚರಿಸಿದರು. ಶ್ರೀ ಕೆ. ಬಿ. ಶಿವಶಂಕರಯ್ಯ ಕಾರ್ಯಕ್ರಮವನ್ನು ನಿರೂಪಿಸಿದರು.

ವರದಿ : ಕೆ. ಬಿ. ಶಿವಶಂಕರಯ್ಯ



ಶ್ರೀಮತಿ ರೋಹಿಣಿ ಅವರ ನೇತೃತ್ವದ ಬೆಂಗಳೂರು ದೂರದರ್ಶನ ತಂಡ ಇತ್ತೀಚೆಗೆ ಶ್ರೀ ಕ್ಷೇತ್ರಕ್ಕೆ ಭೇಟಿ ನೀಡಿ ಶ್ರೀ ಶ್ರೀಗಳವರ ದಿನಚರಿಯೂ ಸೇರಿದಂತೆ ಶ್ರೀ ಮಠದ ವಿವಿಧ ಕಾರ್ಯಚಟುವಟಿಕೆಗಳನ್ನು ಚಿತ್ರೀಕರಿಸಿಕೊಂಡರು.



ಶ್ರೀ ಶ್ರೀಗಳವರ ವಜ್ರಮಹೋತ್ಸವ ಸಂದರ್ಭದಲ್ಲಿ ಭಕ್ತಾದಿಗಳು ಅರ್ಪಿಸಿದ ದಾಸೋಹ ಮಂದಿರದಲ್ಲಿ ಮಾಡಲಾದ ವಿದ್ಯಾರ್ಥಿಗಳಿಗೆ ದಾಸೋಹ ವ್ಯವಸ್ಥೆಯನ್ನು ಶ್ರೀ ಶ್ರೀಗಳವರು ಪರಿಶೀಲಿಸುತ್ತಿರುವುದು.



# 'ದೀನಬಂಧು' - ಶ್ರೀ ಎನ್. ಮಲ್ಲಪ್ಪ

ನಡೆನುಡಿಯಲ್ಲಿ ಏಕತಾನತೆಯನ್ನು ಅಳವಡಿಸಿಕೊಂಡಿರುವ ಶ್ರೀ ಎಸ್. ಮಲ್ಲಪ್ಪನವರು ಅಪ್ಪಟ ಗಾಂಧಿವಾದಿ. ದೀನದಲಿತರು, ಹಿಂದುಳಿದವರ ಬಗ್ಗೆ ಅಪಾರ ಅನುಕಂಪ, ಕಾಳಜಿಯನ್ನು ಹೊಂದಿರುವ ಶ್ರೀಯುತರು ಹೃದಯ ಶ್ರೀಮಂತಿಕೆಗೆ ಹೆಸರಾದವರು. ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸುವುದರ ಮೂಲಕ ಅಸಂಖ್ಯಾತ ಹಿಂದುಳಿದ ವರ್ಗದ ಜನರನ್ನು ವಿದ್ಯಾವಂತರನ್ನಾಗಿ ಮಾಡಿದ ಪುಣ್ಯ ಜೀವಿಗಳು. ಅಣ್ಣ ಬಸವಣ್ಣನವರ ಕಾಯಕವೇ ಕೈಲಾಸ ದಿವ್ಯಮಂತ್ರವನ್ನು ಜೀವನದಲ್ಲಿ ಅಳವಡಿಸಿಕೊಂಡ ಆದರ್ಶ ವ್ಯಕ್ತಿ. ಇವರು ಸಮಾಜಕ್ಕೆ ಸಲ್ಲಿಸಿದ ಅನುಪಮ ಸೇವೆಯನ್ನು ಮನಗಂಡ ಶ್ರೀ ಸಿದ್ಧಗಂಗಾ ಮಠದ ಭಕ್ತಾದಿಗಳು, ಹಳೆಯ ವಿದ್ಯಾರ್ಥಿಗಳು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ೯೧ನೇ ಜನ್ಮ ದಿನಾಚರಣೆಯ ಶುಭಸಂದರ್ಭದಲ್ಲಿ 'ದೀನಬಂಧು' ಎಂಬ ಬಿರುದನ್ನು ನೀಡಿ ಗೌರವಿಸಿದರು. ಅವರ ಒಂದು ಕಿರು ಪರಿಚಯ.

'ಕಲ್ಲರಳಿ ಹೂವಾಗಿ ಎಲ್ಲರಿಗೆ ಬೇಕಾಗಿ ಮಲ್ಲಿಕಾರ್ಜುನ ಶಿಖರ ಬೆಳಗಾಗಿ' ಎನ್ನುತ್ತದೆ ಜಾನಪದ. ಶ್ರೀಯುತ ಎನ್. ಮಲ್ಲಪ್ಪನವರಿಗೆ ಈ ಒಗಟು ಅಕ್ಷರಷಃ ಒಪ್ಪುತ್ತದೆ. ಹಿಂದುಳಿದ ಸಮಾಜದ ಶಿಲಾವಸ್ಥೆಯ ಸ್ಥಿತಿಯಿಂದ ಸ್ವಪ್ರಯತ್ನ, ಸ್ವಾಭಿಮಾನದ ಛಲದಿಂದ ಮೇಲೇರಿದ ಶ್ರೀಯುತರು ಗ್ರಾಮೀಣ ಸಂಸ್ಕೃತಿಯನ್ನು ಜೀವನದುದ್ದಕ್ಕೂ ಸಂರಕ್ಷಿಸಿಕೊಂಡು ಬಂದವರು.

"ಪ್ರಾಮಾಣಿಕತೆ ಮಲ್ಲಪ್ಪನವರ ಜೀವನದ ಉಸಿರು, ಆದರ್ಶದ ಬೆಳ್ಗೊಡೆ ಅವರಿಗೆ ಯಾವಾಗಲೂ ಬೆಂಗಾವಲು. ಕಷ್ಟಾರ್ಜಿತವಲ್ಲದ ಒಂದು ದಮ್ಮಡಿಯನ್ನು ಮುಟ್ಟೆನೆಂಬ ಹಟ, ಸದಾ ಬಡವರ ಪರವಾದ ನಿಲುವು ಹಿಡಿದು ಅಹೋರಾತ್ರಿ ದುಡಿಮೆ; ಇದು ಅವರ ಜೀವನದ ಮೂಲ ಮಂತ್ರ - ಆ ಹಿರಿಯ ಜೀವದ ದೃಢ ಸಂಕಲ್ಪವಾಗಿದೆ".

ತುಮಕೂರಿನ ಸೆರಗಿನಲ್ಲಿ ಅರ್ಜಿರಂಗಣ್ಣನಪಾಳ್ಯ. ಶ್ರೀಯುತ ಮಲ್ಲಪ್ಪನವರಿಗೆ ಜನ್ಮಕೊಟ್ಟ ಪುಣ್ಯಗ್ರಾಮ. ತಂದೆ ಶ್ರೀ ನಂಜಪ್ಪನವರು, ತಾಯಿ ಶ್ರೀಮತಿ ಲಕ್ಷ್ಮಮ್ಮನವರು. ಅಕ್ಷರ ಜಗತ್ತಿಗೆ ಅಪರಿಚಿತರು. ಆದರೆ ಹೃದಯವಂತಿಕೆಗೆ, ಮಾನವೀಯತೆಗೆ ಹೆಸರಾದವರು. ಶ್ರೀಯುತರು ಹಿಂದುಳಿದ ಸಮಾಜದ ಕಷ್ಟಕಾರ್ಪಣ್ಯಗಳನ್ನು ಕಣ್ಣಾರೆ ಕಂಡರು, ನೋವುಂಡರು. ಅಂತರಾಳದಲ್ಲಿ ವಿದ್ಯಾವಂತನಾಗಬೇಕೆಂಬ ಹಟ ಒಂದೇ ಸಮನೆ ಕಟೆಯುತ್ತಿತ್ತು. ಪಟ್ಟು ಹಿಡಿದು ಪಾಠಶಾಲೆಗೆ ಸೇರಿದರು, ಮುನ್ನಡೆದರು. ಹಿಂದಕ್ಕೆ ತಿರುಗಿ ನೋಡಲಿಲ್ಲ. ೧೯೩೦ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದಿಂದ ಬಿ.ಎ., ಪದವೀಧರರಾಗಿ ಹೊರಬಂದರು. ಆತ್ಮ ವಿಶ್ವಾಸದ ಕನಸಿನ ಕನ್ನಂಬಾಡಿ ಅವರೆದುರಿಗಿತ್ತು. ಸರ್ಕಾರಿ ನೌಕರಿಗೆ ಸೇರಿದರು. ಕರ್ತವ್ಯ ನಿಷ್ಠೆಗೆ ಹೆಸರಾದರು. "ಕಾಯಕವೇ ಕೈಲಾಸ" ವೆಂಬುದನ್ನು ತ್ರಿಕರಣ ಶುದ್ಧಿಯಿಂದ ಆರಾಧಿಸಿದರು. ಸಹಕಾರಿ ಇಲಾಖೆಯಲ್ಲಿ ಇನ್‌ಸ್ಪೆಕ್ಟರ್ ಆಗಿ ನೌಕರಿಗೆ ಸೇರಿ ದುರ್ಬಲ ಜನರ ಹಿತಸಾಧನೆಗೆ ತಾವು ಹೋದಕಡೆ ಸಹಕಾರಿ ಸಂಘಗಳನ್ನು ಸ್ಥಾಪಿಸಿದರು. ತಮ್ಮ ಪ್ರಾಮಾಣಿಕ ದುಡಿಮೆಯಿಂದ ಜನಾನುರಾಗಿಗಳಾದರು. ತುಮಕೂರು ಜಿಲ್ಲೆಯಲ್ಲಿ ಗ್ರಾಮೀಣ ಕೈಗಾರಿಕಾ ನಿರ್ದೇಶಕರಾದರು. ಸಮಾಜೋಪಯೋಗಿ ವೃತ್ತಿಪರರಾದ ನೇಕಾರರು, ಕುಂಬಾರರು,ಕಮ್ಮಾರರು ಇಂದೂ ಶ್ರೀ ಮಲ್ಲಪ್ಪನವರ ಸೇವೆಯನ್ನು ಸ್ಮರಿಸುತ್ತಾರೆ. ೧೯೫೦ರಲ್ಲಿ ವಿಶೇಷ ಅಸಿಸ್ಟೆಂಟ್ ಕಮೀಷನರ್ ಆಗಿ ಶ್ರೀಯುತರು ಸಲ್ಲಿಸಿದ ಸೇವೆ ಮರೆಯಲಾರದಂಥದು. ಎಂಟು ತಿಂಗಳಲ್ಲಿ ಒಂದು ಲಕ್ಷ ಎಕರೆ ಭೂಮಿಯನ್ನು ಬಡವರಿಗೆ ವಿತರಿಸಿದರು. "ಮಲ್ಲಪ್ಪನವರ ಸ್ಕೀಂ" ಎಂದೇ ಗ್ರಾಮ ಬಂಧುಗಳ ಬಾಯಲ್ಲಿ ಅರಳಿದ ಈ ದರ್ಖಾಸ್ತು ಯೋಜನೆ ಶ್ರೀಯುತರ ಪ್ರಾಮಾಣಿಕತೆಗೆ ಕಲಶವಿಟ್ಟಿತು. ಕಂದಾಯ ಮಂತ್ರಿ ಶ್ರೀ ಕಡಿದಾಳ್ ಮಂಜಪ್ಪನವರು ವಿಧಾನ ಮಂಡಲದಲ್ಲಿ ಪ್ರಶಂಸಿಸುವಷ್ಟು ಯಶಸ್ವಿಯಾಯಿತು. ಅದಕ್ಕೆ ಕಾರಣ ಮಲ್ಲಪ್ಪನವರ ಕರ್ತವ್ಯನಿಷ್ಠೆ.

೧೯೪೦ರಲ್ಲಿ ಶ್ರೀ ಮಲ್ಲಪ್ಪನವರು ಗೃಹಸ್ಥಾಶ್ರಮಿಗಳಾದರು. ಅವರು ಕೈಹಿಡಿದುದು ಶ್ರೀಮತಿ ರಂಗಮ್ಮನವರನ್ನು. ಸುಶೀಲೆ, ಸುಸಂಸ್ಕೃತೆಯಾದ ರಂಗಮ್ಮನವರು ಮಲ್ಲಪ್ಪನವರ





ಸೇವಾ ಜೀವನಕ್ಕೆ ನೂಲುನೂತ ಸಾಧ್ವಿ, ಗೃಹದೀಪವಾಗಿ ಮನಬೆಳಗಿದ ಮಮತಾಮಯಿ, ನಾಲ್ಕು ಹೆಣ್ಣು ಮೂರು ಗಂಡು ಮಕ್ಕಳನ್ನು ಪಡೆದ ಭಾಗ್ಯವಂತರು. ಮಕ್ಕಳನ್ನು ಶಿಸ್ತಿನಿಂದ ಬೆಳೆಸಿದರು. ವಿದ್ಯಾವಂತರನ್ನಾಗಿ ಮಾಡಿ ಜನಸೇವೆಗೆ ಅರ್ಪಿಸಿದ್ದಾರೆ. ತಂದೆ-ತಾಯಿಗಳಿಗೆ ಒಳ್ಳೆಯ ಮಕ್ಕಳಾಗಿ ಸಮಾಜದಲ್ಲಿಂದು ಬಾಳುತ್ತಿದ್ದಾರೆ ಎಂಬುದು ಹೆಮ್ಮೆಯ ಸಂಗತಿ.

೧೯೭೫ರಲ್ಲಿ ಸರ್ಕಾರಿ ಹುದ್ದೆಯಿಂದ ನಿವೃತ್ತರಾದರು. ಆದರೆ ಶ್ರೀ ಮಲ್ಲಪ್ಪನವರ ಸೇವಾ ಜೀವನಕ್ಕೆ ನಿವೃತ್ತಿ ಇಲ್ಲ. ೯೦ರ ಈ ಇಳಿ ವಯಸ್ಸಿನಲ್ಲೂ, ಅನಾರೋಗ್ಯ ಸ್ಥಿತಿಯಲ್ಲೂ ಅವರ ಚಿಂತನೆಗಳೆಲ್ಲ ಹಿಂದುಳಿದವರನ್ನು ಕುರಿತೇ ಆಗಿವೆ. ಶ್ರೀಮತಿ ರಂಗಮ್ಮನವರು ಅವರ ಅರ್ಧಾಂಗಿಯಾದರೆ; ಶ್ರೀ ಕಾಳಿದಾಸ ವಿದ್ಯಾವರ್ಧಕ ಸಂಘ ಅವರ ಇನ್ನೊಂದು ಅರ್ಧಾಂಗಿಯಾಗಿದೆ. ತುಮಕೂರಿನ ಕಾಳಿದಾಸ ವಿದ್ಯಾರ್ಥಿನಿಲಯ ಮತ್ತು ವಿದ್ಯಾಸಂಸ್ಥೆಗಳು ಶ್ರೀಯುತರ 'ಮಾನಸಿಕ ಮಕ್ಕಳು'. ಸಮಾಜ ಬಾಂಧವರ ಏಳಿಗೆಗಾಗಿ ರೂಪುತಾಳಿದ ಸಂಸ್ಥೆಗಳು. ವಿಚಾರ ಶೀಲರ, ಹೃದಯವಂತಿಕೆಯುಳ್ಳವರ ಮನಸ್ಸನ್ನು ಗೆದ್ದ ಸೇವಾ ಸದನಗಳು. ಅವುಗಳ ನಿಯಂತ್ರಕರಾಗಿ, ಚಾಲಕರಾಗಿ, ಸರ್ವಾಂತರ್ಯಾಮಿ ಶಕ್ತಿಯಾಗಿ ಪರಿಣಮಿಸಿದ 'ಕಾಯಕ ಪರಿಣಾಮಿ'ಗಳು ಶ್ರೀ ಮಲ್ಲಪ್ಪನವರು.

ರಾಜ್ಯದ ಉಣ್ಣೆ ಉದ್ಯಮ ಮತ್ತು ಕುರಿ ಅಭಿವೃದ್ಧಿ ಮಂಡಳಿಯ ಅಧ್ಯಕ್ಷರಾಗಿ ಶ್ರೀಯುತರು ಸಲ್ಲಿಸಿದ ಸೇವೆ ಅವಿಸ್ಮರಣೀಯ. ಸಚಿವರಾಗಿದ್ದ ಶ್ರೀ ಟಿ. ಮರಿಯಪ್ಪನವರು ಅಧಿಕಾರಿಗಳಾಗಿದ್ದ ಶ್ರೀ ಆರ್. ಭರಣಯ್ಯನವರ ಸ್ನೇಹ ವಿಶ್ವಾಸಗಳನ್ನು ಸಂಪಾದಿಸಿದ್ದರು. ನಿಷ್ಕಪಟ ಸ್ವಭಾವದ ಪವಿತ್ರಾತ್ಮರಾದ ಜನ ಸಾಮಾನ್ಯರಲ್ಲಿಯೇ ದೇವರನ್ನು ಕಾಣುವ ಶ್ರೀ ಮಲ್ಲಪ್ಪನವರು ದೈವ ಭಕ್ತರು, ದಯಾಶೀಲರು.

ಶ್ರೀ ಎನ್. ಮಲ್ಲಪ್ಪನವರು ಸೇವಾ ಜೀವನವನ್ನು ಗಮನಿಸಿದ ಸಂಘ ಸಂಸ್ಥೆಗಳು ಸಮಾಜ ಬಾಂಧರು, ಸರ್ಕಾರ ಪ್ರಶಸ್ತಿ ಪುರಸ್ಕಾರಗಳನ್ನಿತ್ತು ಗೌರವಿಸಿವೆ. ದಿನಾಂಕ ೧೯-೧೨-೧೯೯೩ರಲ್ಲಿ ರಾಜ್ಯೋತ್ಸವ ಪ್ರಶಸ್ತಿ ಹಾಗೂ ೨೦-೦೮-೧೯೯೭ರಲ್ಲಿ ದೇವರಾಜ ಅರಸ್ ಪ್ರಶಸ್ತಿ ಪಡೆದ ಸಾರ್ಥಕ ಜೀವಿಗಳು. ಶ್ರೀಯುತರು ಸಮಾಜದ ಋಣವನ್ನು ತೀರಿಸುವ ಮಣಿಹದಲ್ಲಿ ನಿರತರಾಗಿ ಮುನ್ನಡೆದಿದ್ದಾರೆ.

"ಹಾಸುವುದು, ಹೊದೆಯುವುದು, ಉಡುವುದು, ತೊಡುವುದು" ಎಲ್ಲಾ ಖಾದಿ. ಮಾನವತೆಯ ತನಿರಸದಲ್ಲಿ ಮಿಂದ ಗಾಂಧಿವಾದಿ. ಮನುಷ್ಯ ಎಷ್ಟುಕಾಲ ಬದುಕಿದ ಎನ್ನುವುದಕ್ಕಿಂತ ಹೇಗೆ ಬದುಕಿದ ಎನ್ನುವುದೇ ಮುಖ್ಯ ಎನ್ನುವ ಶ್ರೀಯುತರು ಅಣ್ಣ ಬಸವಣ್ಣನವರು ಹೇಳುವಂತೆ "ಲೇಸೆನಿಸಿಕೊಂಡು ಒಂದುದಿನ ಬದುಕಿದರೆ ಸಾಲದೆ" ಎಂಬ ಧ್ಯೇಯವಾದಿಗಳು. ನುಡಿಯಲ್ಲಿ ಅಂಬಿಗರ ಚೌಡಯ್ಯನ ಮಾದರಿ. ಅದೂ ಕಾವ್ಯವೇ. ಶೋಷಿತರ ಪರವಾಗಿ ನಿಂತವರು ಶ್ರೀ ಮಲ್ಲಪ್ಪನವರು. ಬಿದ್ದವರನ್ನು ಉದ್ಧರಿಸುವುದೇ ಧರ್ಮವೆಂಬುದನ್ನರಿತವರು. ಸ್ವಾಭಿಮಾನಿಗಳು. "ಅನ್ಯರಿಗೆ ಅಸಹ್ಯ ಪಡದ" ಸದ್ಗುಣಿಗಳು, ಒಟ್ಟಿನಲ್ಲಿ ಹರವಾದ ಬಾಳು, ಅದಮ್ಯ ಉತ್ಸಾಹ. ತಮ್ಮ ಜನಾಂಗದ ಏಳ್ಗೆಗೆ ಸದಾ ಚಿಂತನೆ. ಅವರ ಜೀವನದಲ್ಲಿ 'ವಿಶ್ರಾಂತಿ ಎಂದರೆ ವೃತ್ತಿ ಬದಲಾವಣೆ' ಎಂಬ ಸೂತ್ರ.

## ಶ್ರೀ ಸಿದ್ಧಲಿಂಗೇಶ್ವರ ಅನಾಥಾಲಯ ಮತ್ತು ಉಚಿತ ವಿದ್ಯಾರ್ಥಿನಿಲಯ, ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ

### ೧೯೯೮-೯೯ನೇ ಸಾಲಿಗೆ ದಾಖಲಾಗಿರುವ ವಿದ್ಯಾರ್ಥಿಗಳ ತರಗತಿವಾರು ವಿವರ

| ತರಗತಿ | ಹೊಸ ವಿದ್ಯಾರ್ಥಿಗಳು | ಹಳೆಯ ವಿದ್ಯಾರ್ಥಿಗಳು | ಒಟ್ಟು |
|---|---|---|---|
| ೧ನೇ | ೨೩ | - | ೨೩ |
| ೨ನೇ | ೧೮ | ೮ | ೨೬ |
| ೩ನೇ | ೫೮ | ೨೨ | ೮೦ |
| ೪ನೇ | ೧೨೬ | ೫೫ | ೧೮೧ |
| ೫ನೇ | ೩೧೫ | ೯೯ | ೪೧೪ |
| ೬ನೇ | ೩೦೭ | ೨೩೬ | ೫೪೩ |
| ೭ನೇ | ೨೬೦ | ೩೩೦ | ೫೯೦ |
| ೮ನೇ | ೭೦೬ | ೩೪೪ | ೧೦೫೦ |
| ೯ನೇ | ೧೭೦ | ೫೫೭ | ೭೨೭ |
| ೧೦ನೇ | ೧೧೧ | ೬೩೮ | ೭೪೯ |
| ಟಿ.ಸಿ.ಎಚ್. | ೯೦ | ೯೦ | ೧೮೦ |
| ಕಾಲೇಜು | ೨೦೬ | ೨೧೩ | ೫೧೯ |
| *ಒಟ್ಟು* | *೨೩೯೦* | *೨೬೯೨* | *೫೦೮೨* |

೫೦೮೨ ವಿದ್ಯಾರ್ಥಿಗಳ ಜೊತೆಗೆ ೩೬೮ ವಿದ್ಯಾರ್ಥಿಗಳು ವೃತ್ತಿ ತರಬೇತಿ ಪಡೆಯುತ್ತಿದ್ದಾರೆ.

# ಶಿಕ್ಷಣ ಪದ್ಧತಿ : ಒಂದು ಅವಲೋಕನ

-- ಎಸ್. ಶಿವಕುಮಾರ್
ಅಧೀಕ್ಷಕರು, ಶ್ರೀ ಬಸವೇಶ್ವರ ಶಿಕ್ಷಕ ತರಬೇತಿ ಕೇಂದ್ರ,
ಶ್ರೀ ಸಿದ್ಧಗಂಗಾಮಠ

"ಶಿಕ್ಷಣ ಎಂದರೆ ವಿದ್ಯಾಭ್ಯಾಸ ಪದ್ಧತಿ, ವಿದ್ಯಾಭ್ಯಾಸ ಕ್ರಮ ಎಂದರ್ಥ. ಮಾನವನ ಜ್ಞಾನವಿಕಾಸಕ್ಕೆ ಈ ಶಿಕ್ಷಣ, ವಿದ್ಯೆ ಬಹುಮುಖ್ಯವಾದುವು. ಮಾನವನಿಗೆ ವಿದ್ಯೆಯೇ ಉತ್ತಮವಾದ ಸೌಂದರ್ಯ. ವಿದ್ಯೆ ಎಂಬುದು ರಹಸ್ಯವಾಗಿ ಬಚ್ಚಿಟ್ಟ ಧನ. ವಿದ್ಯೆಯು ಭೋಗವನ್ನೂ ಕೀರ್ತಿಯನ್ನೂ ತಂದು ಕೊಡುತ್ತದೆ. ವಿದ್ಯೆಯಿಂದ ಧರ್ಮ ಧರ್ಮಜ್ಞಾನ ಪ್ರಾಪ್ತಿಯಾಗುತ್ತದೆ. ಧರ್ಮಾರ್ಥ ಕಾಮ ಮೋಕ್ಷಗಳೆಂಬ ಪುರುಷಾರ್ಥ ಸಿದ್ಧಿಯಾಗುತ್ತದೆ. ವಿದ್ಯೆ ತಂದೆಯಂತೆ ಹಿತವನ್ನು ಉಂಟುಮಾಡುತ್ತದೆ. ತಾಯಿ ಮಕ್ಕಳನ್ನು ಸಾಕಿ ಸಲಹಿ ಪೋಷಿಸುವಂತೆ ವಿದ್ಯೆ ಜೀವನಕ್ಕೆ ಸಹಾಯಕವಾಗುತ್ತದೆ. ಪ್ರಿಯೆ ಸುಖವನ್ನುಂಟು ಮಾಡುವಂತೆ ವಿದ್ಯೆಯೆ ಮನೋಲ್ಲಾಸಕ ವಿಷಯ ಪರಿಜ್ಞಾನವನ್ನುಂಟುಮಾಡುತ್ತದೆ. ಆದುದರಿಂದಲೇ ವಿದ್ಯೆ ಬೇಡಿದ್ದನ್ನು ನೀಡುವ ಕಲ್ಪವೃಕ್ಷಕ್ಕೆ ಸಮಾನವಾದುದು."

ಭಾರತೀಯ ಶಿಕ್ಷಣ ಪರಂಪರೆಗೆ ತನ್ನದೇ ಆದ ವಿಶಿಷ್ಟ ಸ್ಥಾನವಿದ್ದು, ಗುರುಕುಲ ಪದ್ಧತಿಯ ಶಿಕ್ಷಣ ಪ್ರಾಚೀನ ಕಾಲದಿಂದಲೂ ಪ್ರಖ್ಯಾತಿಯಾಗಿದೆ. ಗುರುಕುಲ ಪದ್ಧತಿಯ ಶಿಕ್ಷಣದಿಂದ ನಮಗೆ ಅರಿವಾಗುವ ವಿಚಾರಗಳೆಂದರೆ, ಶಿಕ್ಷಣ ಕ್ರಮಗಳು ಹಾಗೂ ಧ್ಯೇಯಗಳ, ಆ ಕಾಲದಲ್ಲಿ ಏಕಮುಖವಾಗಿದ್ದರೂ ನಂತರದ ದಿವಸಗಳಲ್ಲಿ ಶಿಕ್ಷಣದಲ್ಲಿ ಬದಲಾವಣೆಗಳು ಕಂಡು ಬಂದು ಭಾಷಾ ಬೆಳವಣಿಗೆಯ ದ್ಯೋತಕವಾದ ಶ್ರವಣ, ವಾಚನ, ಸ್ಮರಣ, ಅಭಿವ್ಯಕ್ತಿ, ಬರವಣಿಗೆ, ವಿಮರ್ಶೆ, ಚರ್ಚೆ ಈ ಅಂಶಗಳು ವ್ಯಕ್ತವಾಗುತ್ತವೆ.

ಪ್ರಾಚೀನ ಕಾಲದ ಶಿಕ್ಷಣದ ಧ್ಯೇಯಗಳನ್ನು ಪರಿಶೀಲಿಸಿದಾಗ ಶಿಕ್ಷಣದ ಧ್ಯೇಯಗಳು ಭಾರತದ ಶಿಕ್ಷಣ ಪದ್ಧತಿಗೆ ಅನುಗುಣವಾಗಿ ಸಂಸ್ಕೃತಿ, ಪರಂಪರೆಯನ್ನು ಅನುಸರಿಸಿ, ನೈತಿಕ ಮೌಲ್ಯ, ಆಧ್ಯಾತ್ಮಿಕ ವಿಚಾರಗಳತ್ತ ಹೆಚ್ಚಿನ ಆದ್ಯತೆ ಗುರುಕುಲ ಪದ್ಧತಿಯಿಂದ ವ್ಯಕ್ತವಾಗುತ್ತದೆ. ಋಷಿಗಳು, ಆಧ್ಯಾತ್ಮಿಕ ಮತ್ತು ನೈತಿಕ ಮೌಲ್ಯಗಳ ಬೆಳವಣಿಗೆಯೂ ಸೇರಿ ವ್ಯಕ್ತಿಯ ಸರ್ವತೋಮುಖ ಬೆಳವಣಿಗೆಗೆ ಆದ್ಯತೆ ನೀಡಿದ್ದರು. ಧಾರ್ಮಿಕ ನೆಲೆಗಟ್ಟು, ಶಿಕ್ಷಣ ಕ್ಷೇತ್ರದಲ್ಲಿ ಮಹತ್ವಪೂರ್ಣ ಪಾತ್ರ ಹೊಂದಿತ್ತು.

ವೇದಗಳ ಕಾಲದಲ್ಲಿಯೂ ಶಿಕ್ಷಣದ ಗುರಿ, ಧಾರ್ಮಿಕ, ಆಧ್ಯಾತ್ಮಿಕ, ನೈತಿಕ ಮೌಲ್ಯಗಳ ಆಧಾರವಾಗಿತ್ತು. ಗುರುಕುಲದಲ್ಲಿ ಸಂಜೆಯ ವೇಳೆಯಲ್ಲಿ ಪ್ರಾರ್ಥನೆ, ಧಾರ್ಮಿಕ ಸಭೆ, ಸಮಾರಂಭಗಳು ನಡೆಯುತ್ತಿದ್ದು. ಧಾರ್ಮಿಕ ಪರಿಸರ ತುಂಬಿತ್ತು. ಇದರ ಪರಿಣಾಮವಾಗಿಯೇ "ಸಾವಿದ್ಯಾಯ ಯ ವಿಮುಕ್ತವೆ" ಎಂಬ ಉಪನಿಷತ್ ಉಕ್ತಿಯಂತೆ ಜೀವನ್ಮುಕ್ತಿಯು ಶಿಕ್ಷಣದ ಗುರಿ ಎಂಬುದು ವ್ಯಕ್ತವಾಗುತ್ತದೆ. ಆಧ್ಯಾತ್ಮಿಕ ಹಾಗೂ ಧಾರ್ಮಿಕ ಧ್ಯೇಯಗಳು ಚಾರಿತ್ರ್ಯ ನಿರ್ಮಾಣದ ಧ್ಯೇಯಕ್ಕೂ ಸಂಬಂಧಿಸಿದ್ದು, ಚಾರಿತ್ರ್ಯವಂತ ವಿದ್ಯಾರ್ಥಿಗಳಿಗೆ ಮಾತ್ರ ಗುರುಕುಲಗಳಲ್ಲಿ ಪ್ರವೇಶಾವಕಾಶವಿತ್ತು. ಗುರುಕುಲದಲ್ಲಿ ನಡೆಯುತ್ತಿದ್ದ ಧಾರ್ಮಿಕ ವಿಧಿವಿಧಾನಗಳ ಆಚರಣೆಗಳು, ವಿದ್ಯಾರ್ಥಿಗಳ ಮೇಲೆ ಗಾಢವಾದ ಪ್ರಭಾವವನ್ನು ಬೀರುತ್ತಿದ್ದವು.

ಇಂದು ಶಾಲೆಗಳು ಎಲ್ಲಾ ಕಡೆಗಳಲ್ಲಿ ಕಂಡು ಬರುತ್ತಿವೆ. ಮಕ್ಕಳು ಶಾಲೆಗೆ ಹಾಜರಾಗಿ ಪ್ರಕೃತಿ, ಪರಿಸರ ಮತ್ತು ಸಾಮಾಜಿಕ ವಿಷಯಗಳನ್ನು ಕಲಿಯುತ್ತಾರೆ. ಶಾಲೆ, ಮನೆಯ ಒಳಗೆ ಹೊರಗೆ, ರೇಡಿಯೋ, ದೂರದರ್ಶನ, ಪತ್ರಿಕೆಗಳು ಅರಿವಿನ ದಿಗಂತವನ್ನು ವಿಸ್ತಾರವಾಗುವಂತೆ ಮಾಡುತ್ತವೆ. ಕಲಿಕೆಯ ಪರಿಣಾಮವಾಗಿ ಕಲಿಯುವವರಲ್ಲಿ ಜಾಗೃತಿ, ತಿಳುವಳಿಕೆ ವಿಶ್ಲೇಷಣೆ ಇವುಗಳ ನಿರ್ದಿಷ್ಟ ಕಲ್ಪನೆಗಳನ್ನು ವಿಶ್ವದಲ್ಲಿನ ಭೌತಿಕ, ಜೈವಿಕ ಮತ್ತು ಸಾಮಾಜಿಕ ಜಗತ್ತಿನ ಸ್ವರೂಪಗಳ ಪರಿಚಯವಾಗುತ್ತದೆ. ತತ್ವಶಾಸ್ತ್ರವು ಶಿಕ್ಷಣದ ಹಲವು ಅಂಶಗಳನ್ನು ಕೆಲವು ಪ್ರಶ್ನೆಗಳ ಮೂಲಕ ವಿಧಿ-ವಿಧಾನಗಳನ್ನು ಪರಿಶೀಲಿಸುವುದು. ಕಲಿಕೆಗೆ ಸಂಬಂಧಿಸಿದಂತೆ ಪ್ರಕೃತಿ, ಜೀವನ, ಸಮಾಜ ಇವುಗಳ ಕಲ್ಪನೆ ಏನು? ಯಾವುದು ಶಿಕ್ಷಣವೆನಿಸುವುದು? ಶಿಕ್ಷಣದ





ಗುರಿಗಳಾವುವು? ಯಾವ ಪಠ್ಯಕ್ರಮ ಶಿಕ್ಷಣಕ್ಕೆ ಸೇರ್ಪಡೆಯಾಗಬೇಕು, ಎಷ್ಟು ಉತ್ತಮವಾಗಿ ಶಿಕ್ಷಣ ಕೊಡಬೇಕು, ಇತ್ಯಾದಿ ವಿಚಾರಗಳನ್ನು ತತ್ವಶಾಸ್ತ್ರ ವ್ಯಕ್ತಪಡಿಸುವುದು.

ಮಕ್ಕಳನ್ನು ಶಾಲೆಗೆ ಕಳುಹಿಸುವುದು, ಕೇವಲ ಅಕ್ಷರಸ್ಥರನ್ನಾಗಿ ಮಾಡುವುದರ ಜೊತೆಗೆ ಬೌದ್ಧಿಕ ಹಾಗೂ ಮಾನಸಿಕ ವಿಕಾಸವಾಗುವಂತೆ ಮಾಡಿ ಭವ್ಯ ಭವಿಷ್ಯವನ್ನು ರೂಪಿಸಿಕೊಳ್ಳಲು ನೆರವಾಗುವಂತಹ ಶಿಕ್ಷಣ ನೀಡುವುದಾಗಿದೆ. ಮಕ್ಕಳಲ್ಲಿ ಸುಪ್ತವಾಗಿರುವ ಪ್ರತಿಭೆಗೆ ಸೂಕ್ತ ಪರಿಸರ ಒದಗಿಸಿದಾಗ ಶಿಕ್ಷಣಕ್ಕೆ ಅರ್ಥ ಬರುತ್ತದೆ.

ಇಂದು ಶಿಕ್ಷಣ ಪದ್ಧತಿಯು ತತ್ವಶಾಸ್ತ್ರ, ಸಮಾಜಶಾಸ್ತ್ರ ಹಾಗೂ ಮನಃಶಾಸ್ತ್ರದ ಆಧಾರದ ಮೇಲೆ ರೂಪಗೊಂಡು ಹಲವು ಗುರಿಗಳನ್ನು ಹೊಂದಿದೆ. ಕಲಿಯುವವರಲ್ಲಿ ಅಗತ್ಯ ಬದಲಾವಣೆ ತರುವ, ದೈಹಿಕ, ಮಾನಸಿಕ, ಆಧ್ಯಾತ್ಮಿಕ, ನೈತಿಕ, ಸಾಮಾಜಿಕ, ಭಾವನಾತ್ಮಕ ಅಂಶಗಳ ಬೆಳವಣಿಗೆ ಮತ್ತು ವಿಕಾಸಗಳಿಗೆ ಸಂಬಂಧಿಸಿದೆ. ಅದರಂತೆ ಈಗಿನ ಶೈಕ್ಷಣಿಕ ಗುರಿಗಳನ್ನು ಹೀಗೆ ಹೇಳಬಹುದು. ಜೀವನದ ಸಿದ್ಧತೆಗಾಗಿ ಶಿಕ್ಷಣ, ಮಾರ್ಗದರ್ಶನವಾಗಿ ಬೆಳವಣಿಗೆಗಾಗಿ ಸಂಸ್ಕೃತಿಯ ರಕ್ಷಣೆಗಾಗಿ ಶಿಕ್ಷಣ, ಆತ್ಮಸಾಕ್ಷಾತ್ಕಾರಕ್ಕಾಗಿ, ಭಾವೈಕ್ಯತೆಗಾಗಿ ಶಿಕ್ಷಣ ಎಂದು ಹೇಳಬಹುದು.

ಭಾರತ ಸ್ವಾತಂತ್ರ್ಯ ನಂತರ ಶಿಕ್ಷಣಕ್ಕೆ ಹೆಚ್ಚು ಮಹತ್ವ ನೀಡುತ್ತಾ ಬಂದಿದೆ. ಜನರಲ್ಲಿ ಶಿಕ್ಷಣ ಮೂಲಭೂತ ಹಕ್ಕು ಎಂಬ ಜಾಗೃತಿ ಮೂಡಿದೆ. ಆದಾಗ್ಯೂ ಶಿಕ್ಷಣದ ಸೌಲಭ್ಯ, ಅವಕಾಶಗಳು ಎಲ್ಲರಿಗೂ ಲಭ್ಯವಾಗಿಲ್ಲ. ರಾಷ್ಟ್ರೀಯ ಶಿಕ್ಷಣ ನೀತಿಯ ಜಾರಿ, ನೀತಿ-ನಿಯಮಗಳ ನಿರೂಪಣೆಯಿಂದ ಶಿಕ್ಷಣ ಪದ್ಧತಿಯಲ್ಲಿನ ಲೋಪ-ದೋಷಗಳನ್ನು ಸರಿಪಡಿಸಬೇಕಾದುದು ಅಗತ್ಯವಾಗಿದೆ. ಶಿಕ್ಷಣದ ಗುಣಮಟ್ಟ ಸುಧಾರಿಸಲು ಖಾಸಗೀ ಶಾಲಾ-ಕಾಲೇಜುಗಳ ರಾಷ್ಟ್ರೀಕರಣವಾಗಬೇಕಾಗಿದೆ.

ಶೈಕ್ಷಣಿಕ ಪದ್ಧತಿಯಲ್ಲಿ ಗುರಿಗಳಲ್ಲಿನ ಲೋಪದೋಷದಿಂದಾಗಿ ಪ್ರಾಮಾಣಿಕತೆ, ಸಚ್ಚಾರಿತ್ರ್ಯ, ದೇಶಪ್ರೇಮ, ದೇಶಭಕ್ತಿ ಆಧ್ಯಾತ್ಮಿಕತೆಗಳ ಬೆಳವಣಿಗೆಯತ್ತ ಮಕ್ಕಳ ಮನಸ್ಸನ್ನು ಪರಿವರ್ತಿಸಿ ಉತ್ತಮ ಪ್ರಜೆಗಳನ್ನು, ನಿರ್ಮಾಣ ಮಾಡುವಲ್ಲಿ ಪ್ರಸ್ತುತ ಶಿಕ್ಷಣ ಪದ್ಧತಿಯಿಂದ ಸಾಧ್ಯವಾಗುತ್ತಿಲ್ಲ. ಈ ವಿಷಯದಲ್ಲಿ ಪೋಷಕರ ಪಾತ್ರವೂ ಹಿರಿದು ಎನಿಸುತ್ತದೆ. ಕಾರಣ ತಮ್ಮ ಮಕ್ಕಳ ಭವಿಷ್ಯವನ್ನು, ಮಕ್ಕಳ ಅಭಿಪ್ರಾಯ ಆಸಕ್ತಿ, ಅಭಿರುಚಿಗಳ ಕಡೆಗೆ ಆದ್ಯತೆ ಕೊಡದೆ ಪ್ರತಿಷ್ಠಿತ ಕೋರ್ಸುಗಳಿಗೆ ಮಕ್ಕಳನ್ನು ಸೇರಿಸಬೇಕೆಂಬ ಹಂಬಲದಿಂದ ಬಲವಂತವಾಗಿ ಮಕ್ಕಳನ್ನು ಅವರಿಗೆ ಆಸಕ್ತಿ ಇಲ್ಲದ ಕೋರ್ಸುಗಳಿಗೆ ಸೇರಿಸುತ್ತಿರುವುದು ಹೆಚ್ಚುತ್ತಿದೆ. ಇದರಿಂದ ಪ್ರತಿಭೆ ಕುಂಠಿತವಾಗಿ ಬೆಳವಣಿಗೆಗೆ ಅವಕಾಶವಿರುವುದಿಲ್ಲ.

ಶಿಕ್ಷಣದ ಪದ್ಧತಿಯಿಂದ ಸಾಮಾಜಿಕ, ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಮೌಲ್ಯಗಳ ಬೆಳೆವಣಿಗೆ ಇಂದು ಎಂದಿಗಿಂತಲೂ ಅತಿ ಅಗತ್ಯವಾಗಿದೆ. ಮಕ್ಕಳಲ್ಲಿ ಆದರ್ಶ ಮೌಲ್ಯಗಳನ್ನು ಬೆಳಸುವ ಜವಾಬ್ದಾರಿ ಕೇವಲ ಶಾಲೆಗಳಿಗೆ ಸೀಮಿತವಾಗಿರದೆ ಪೋಷಕರು ಹಾಗೂ ಸಮಾಜದ ಮೇಲೆಯೂ ಇದೆ ಎಂಬುದನ್ನು ಅರಿಯಬೇಕು. ಅದಕ್ಕಾಗಿ ಶಾಲೆಗಳಲ್ಲಿ ಮಕ್ಕಳಿಗೆ ಉತ್ತಮ ಶಿಕ್ಷಣ ನೀಡಿದರೆ ಸತ್ಪ್ರಜೆಗಳಾಗಲು ಸಹಾಯವಾಗುತ್ತದೆ. ಸಂಸ್ಕೃತಿಯ ಬೆಳವಣಿಗೆ, ನಾಗರಿಕತೆ, ಪೌರತ್ವ ತರಬೇತಿ, ಸಾಮಾಜಿಕ ಜೀವನದ ಅರಿವು ಇತ್ಯಾದಿಗಳ ಬೆಳವಣಿಗೆಗೆ ಶಿಕ್ಷಣ ಅವಶ್ಯಕವಾಗಿದೆ.

ರವೀಂದ್ರನಾಥ ಠಾಗೂರ್‌ರ ಹೇಳುವಂತೆ ನಮ್ಮ ದೇಶದ ಪರಂಪರೆ, ಸಂಸ್ಕೃತಿ, ಪರಿಸರ ಇವುಗಳನ್ನು ಆಧರಿಸಿ ಸ್ವಯಂ ಅಭಿವ್ಯಕ್ತಿ ಹಾಗೂ ಸೃಜನಾತ್ಮಕತೆಯನ್ನು ಮಕ್ಕಳಲ್ಲಿ ಅಭಿವೃದ್ಧಿಪಡಿಸಬೇಕು.

# ಬೇವಿನ ಮರ

-ಎಚ್. ಎಸ್. ಸಿದ್ಧಗಂಗಪ್ಪ

**ಬಹುಪಯೋಗಿಯಾದ ಬೇವಿನ ಮರವನ್ನು ಔಷಧಿ ಮರವೆಂದು ಕರೆಯುತ್ತಾರೆ. ಉತ್ತಮ ಹಾಗೂ ತಂಪಾದ ಗಾಳಿಯನ್ನು ನೀಡುವ ಈ ಮರದ ತೊಗಟೆ, ಗೊಂದು, ಚಿಗುರು, ಎಲೆ, ಹೂವು, ಬೀಜ, ಎಣ್ಣೆ, ಹಿಂಡಿ, ಬೇವಿನ ಎಲೆಯ ರಸವನ್ನು ಔಷಧಿಗಾಗಿ ಉಪಯೋಗಿಸಲಾಗುತ್ತಿದೆ. ಜ್ವರ, ಸಿಡುಬು, ಮಲೇರಿಯಾ, ಕಾಮಾಲೆ, ಮೂಲವ್ಯಾಧಿ ಮೊದಲಾದ ರೋಗಗಳಿಗೆ ಸಂಜೀವಿನಿ. ಬೇವು ಬಾಯಿಗೆ ಕಹಿಯಾದರೂ ಉದರಕ್ಕೆ ಸಿಹಿ.**

*ಬ್ಯಾಸಿಗೆ ದಿವಸಕ ಬೇವಿನ ಮರತಂಪ*
*ಭೀಮರತಿಯೆಂಬ ಹೊಳಿತಂಪ - ಹಡೆದವ್ವ*
*ನೀ ತಂಪ ನನ್ನ ತವರೀಗೆ.*

ಬೇವಿನ ಮರವನ್ನು ನಮ್ಮ ಜನಪದರು ಕಂಡ ರೀತಿಯಿದು. ಬೇವಿನ ಮರದ ತಂಪನ್ನು ತಾಯಿಗೆ ಹೋಲಿಸಿರುವುದು, ಅದರ ಮಹತ್ವವನ್ನು ಸೂಚಿಸುತ್ತದೆ. ಬೇಸಿಗೆಯಲ್ಲಿ ಬೇವಿನ ಮರದ ಆಶ್ರಯ ದಣಿವನ್ನು ನಿವಾರಿಸಿ ಉಲ್ಲಾಸ; ಚೈತನ್ಯವನ್ನು ನೀಡುತ್ತದೆ.

ಬೇವು ಜೀವನದಲ್ಲಿ ಬರುವ ಕಷ್ಟಗಳಿಗೆ ನೋವು ದುಮ್ಮಾನಗಳಿಗೆ ಸಂಕೇತ. ಈ ದೃಷ್ಟಿಯಿಂದ ಹಿಂದುಗಳು ಹೊಸ ವರ್ಷದ ಪ್ರಾರಂಭದ ದಿನ (ಯುಗಾದಿ) ಬೆಲ್ಲದ ಜೊತೆಗೆ ಬೇವನ್ನು ಸೇರಿಸಿ ನೆಂಟರಿಷ್ಟರೊಂದಿಗೆ ಸ್ನೇಹಿತರೊಂದಿಗೆ ವಿನಿಮಯ ಮಾಡಿಕೊಳ್ಳುತ್ತಾರೆ. ಜೀವನದಲ್ಲಿ ಸುಖದುಃಖವನ್ನು ಸಮನ್ವಯ ದೃಷ್ಟಿಯಿಂದ ಕಾಣಬೇಕೆನ್ನುವ ಸಂದೇಶ ಇದರಲ್ಲಿ ಅಡಗಿದೆ. ಬೇವು ಬಾಯಿಗೆ ಕಹಿ, ಉದರಕ್ಕೆ ಸಿಹಿ. ಇದರ ಎಲೆಗಳನ್ನು ನಿಯಮಿತವಾಗಿ ಸೇವಿಸಿದರೆ ಹಲವಾರು ರೋಗಗಳು ವಾಸಿಯಾಗುತ್ತದೆ ಎಂಬುದು ತಜ್ಞರ ಅಭಿಪ್ರಾಯ. ಔಷಧಿ ಗುಣಗಳಿಂದ ಕೂಡಿದ ಈ ಬೇವಿನಿಂದ ನಾನಾ ರೀತಿಯ ಉಪಯೋಗವಿದೆ.

ಹೆಚ್ಚು ಮಳೆ ಬೀಳದ ಬಹುತೇಕ ಬಯಲು ಪ್ರದೇಶಗಳಲ್ಲಿ ಬೇವಿನ ಮರ ಬೆಳೆಯುತ್ತಾರೆ. ರಸ್ತೆ ಬದಿಗಳಲ್ಲಿ, ಹೊಳೆ ದಂಡೆಗಳಲ್ಲಿ, ಹೊಲದ ಬದಿಯಲ್ಲಿ ಬೆಳೆಯುವ ಈ ಮರ ಎಲ್ಲಾ ರೀತಿಯ ಮಣ್ಣಿನ ವಾತಾವರಣಕ್ಕೆ ಹೊಂದಿಕೊಳ್ಳುತ್ತದೆ. ಸದಾಕಾಲದಲ್ಲಿಯೂ ಹಚ್ಚ ಹಸಿರಿನಿಂದ ಕೂಡಿರುವ ಬೇವಿನ ಮರ, ನೀರಿನಾಂಶ ಕಡಿಮೆ ಇರುವ ಪ್ರದೇಶದಲ್ಲಿ ಮಾರ್ಚ-ಏಪ್ರಿಲ್ ತಿಂಗಳಿನಲ್ಲಿ ಎಲೆಗಳು ಉದುರಿ ಮತ್ತೆ ಚಿಗುರಲಾರಂಭಿಸುತ್ತವೆ. ಈ ಮರ ಸಾಮಾನ್ಯವಾಗಿ೧೪ ರಿಂದ ೧೫ ಮೀಟರ್ ಎತ್ತರಕ್ಕೆ, ೩ ರಿಂದ ೪ ಮೀಟರ್ ದಪ್ಪವಾಗಿ ಬೆಳೆಯುತ್ತದೆ.

### *ಬೀಜಗಳ ಸಂಗ್ರಹ*

ಬೇವಿನ ಬೀಜಗಳನ್ನು ಬಹಳ ದಿನಗಳವರೆಗೆ ಸಂಗ್ರಹಿಸಿಡಲು ಆಗುವುದಿಲ್ಲ. ಈ ಬೀಜಗಳು ಬಹುಬೇಗ ಕೊಳೆತು ಹೋಗುವ ಗುಣ ಹೊಂದಿದ್ದು, ಹಣ್ಣಿನಿಂದ ಬೀಜಗಳನ್ನು ಸಂಗ್ರಹಿ







ಸಿದ ೧೫ ದಿನಗಳೊಳಗೆ ಪಾತಿಗಳಲ್ಲಿ ಅಥವಾ ಪಾಲಿತೀನ್ ಚೀಲಗಳಲ್ಲಿ ಬಿತ್ತನೆ ಮಾಡಬೇಕು.೧೫ ದಿನಗಳ ನಂತರ ಬಿತ್ತನೆ ಮಾಡಿದ ಮೊಳಕೆ ಶಕ್ತಿಯನ್ನು ಕಳೆದು ಕೊಳ್ಳುತ್ತದೆ. ಬೀಜಗಳಿಂದ ಎಣ್ಣೆ ತೆಗೆಯಬೇಕಾದರೆ ಬೀಜಗಳನ್ನು ಹಣ್ಣಿನಂದ ಬೇರ್ಪಡಿಸಿದ ನಂತರ ಅದಷ್ಟು ಬೇಗ ತೆಗೆಯಬೇಕು.

### *ಬೆಳೆಸುವ ವಿಧಾನ*

ಬೇವಿನ ಬೀಜಗಳನ್ನು ರೈತರು ತಮ್ಮ ಹೊಲದ ಬದುಗಳಲ್ಲಿ, ಹಳ್ಳದ ದಂಡೆಗಳಲ್ಲಿ ಹಾಗೂ ಅನುಕೂಲವಾದ ಸೂಕ್ತ ಸ್ಥಳದಲ್ಲಿ ಸಣ್ಣ ಸಣ್ಣ ಗುಂಡಿಗಳನ್ನು ತೆಗೆದು ಗೊಬ್ಬರವನ್ನು ಮಿಶ್ರ ಮಾಡಿ ಗುಣಿಗೆ ಎರೆಡೆರಡು ಬೀಜಗಳಂತೆ ಬಿತ್ತಿ ಬೆಳೆಯಬಹುದು.

ಒಟ್ಟಾಗಿ ಸಸಿಗಳನ್ನು ಬೆಳೆಸಬೇಕಾದರೆ ಮೊದಲು ಚಿಕ್ಕ ಚಿಕ್ಕ ಪಾತಿಗಳನ್ನು ನಿರ್ಮಿಸಬೇಕು. ಹೆಚ್ಚು ಮಳೆ ಬೀಳುವ ಪ್ರದೇಶಗಳಲ್ಲಿ ಪಾತಿಗಳನ್ನು ಸ್ವಲ್ಪ ಎತ್ತರದಲ್ಲಿ ಮಾಡಬೇಕು. ಇದರಿಂದ ಬಿದ್ದ ಮಳೆ ನೀರು ಅಲ್ಲಿಯೇ ನಿಲ್ಲದೆ ಬಸಿದು ಹೋಗಲು ಅನುಕೂಲವಾಗುತ್ತದೆ. ಹೀಗೆ ಮಾಡುವುದರಿಂದ ಬೀಜಗಳು ಕೆಡದಂತೆ ನೋಡಿಕೊಳ್ಳಬಹುದು. ಸಸಿಗಳು ಹುಲುಸಾಗಿ ಬೆಳೆಯಲು ಒಟ್ಟು ಪಾತಿಗಳಿಗೆ ಚೆನ್ನಾಗಿ ಮಾಗಿದ ಗೊಬ್ಬರ, ಮರಳು ಹಾಗೂ ಕೆಂಪು ಮಣ್ಣನ್ನು ಚೆನ್ನಾಗಿ ಮಿಶ್ರಣ ಮಾಡಬೇಕು. ನಂತರ ಉತ್ತಮ ಬೀಜಗಳನ್ನು ತೆಳುವಾಗಿ ನಿರ್ದಿಷ್ಟ ಅಂತರದಲ್ಲಿರುವಂತೆ ಹರಡಿ ಅದರ ಮೇಲೆ ತೆಳುವಾಗಿ ಮಣ್ಣನ್ನು ಹಾಕಿ ಮುಚ್ಚಬೇಕು. ಬೀಜಗಳನ್ನು ನೆಟ್ಟ ಮೇಲೆ ಪ್ರತಿದಿನ ಎರಡು ಸಾರಿ ತುಂತುರ ಹನಿಗಳ ರೂಪದಲ್ಲಿ ನೀರನ್ನು ಚಿಮುಕಿಸಬೇಕು. ಹೀಗೆ ಮಾಡುವುದರಿಂದ ತೇವಾಂಶವನ್ನು ಸಮ ಪ್ರಮಾಣದಲ್ಲಿ ಕಾಯ್ದುಕೊಳ್ಳಲು ಅನುಕೂಲವಾಗುವುದು. ಇದರಿಂದ ಬೀಜಗಳು ಮೊಳೆಯುವುದಕ್ಕೆ ಸೂಕ್ತ ವಾತಾವರಣವನ್ನು ಕಲ್ಪಿಸಿಕೊಟ್ಟಂತಾಗುವುದು. ಸಾಮಾನ್ಯವಾಗಿ ಬೀಜಗಳು ೧೦ ರಿಂದ ೨೦ ದಿನಗಳೊಳಗೆ ಮೊಳೆತು ಚಿಗುರೊಡೆಯುತ್ತವೆ. ಚಿಗುರೊಡೆದ ಸಸಿಗಳು ಚೆನ್ನಾಗಿ ಬೆಳೆಯಲು ಆಗಿಂದಾಗ್ಗೆ ಪಾತಿಗಳಲ್ಲಿ ಬೆಳೆಯುವ ಕಳೆಯನ್ನು ನಾಶಪಡಿಸಬೇಕು. ಜೊತೆಗೆ ಹದವರಿತು ನೀರನ್ನು ಹಾಕಬೇಕು. ಈ ಹಂತದಲ್ಲಿ ಸೂಕ್ತ ಮುನ್ನೆಚ್ಚರಿಕೆ ಕ್ರಮ ಕೈಗೊಳ್ಳದಿದ್ದರೆ ಸಸಿಗಳು ಬೆಳವಣಿಗೆ ಕುಂಠಿತವಾಗುತ್ತದೆ.

ಸಸಿಗಳು ಒಟ್ಟು ಪಾತಿಯಲ್ಲಿ ಸುಮಾರು ೫ ರಿಂದ ೮ ಸೆಂಟಿಮೀಟರ್ ಎತ್ತರಕ್ಕೆ ಬೆಳೆದ ಮೇಲೆ ಕಿತ್ತು ಪಾಲಿತೀನ್ ಚೀಲ ಅಥವಾ ಮಣ್ಣಿನ ಮಡಿಕೆಗಳಲ್ಲಿ ನಾಟಿ ಮಾಡಬೇಕು. ಹೀಗೆ ಮಾಡುವುದರಿಂದ ಉತ್ತಮ ಸಸಿಗಳನ್ನು ಪಡೆಯಲು ಸಾಧ್ಯವಾಗುತ್ತದೆ. ಸಸಿಗಳನ್ನು ಪಾಲಿತೀನ್ ಚೀಲ ಅಥವಾ ಕುಂಡಗಳಿಗೆ ೧:೧:೧ ರ ಪ್ರಮಾಣದಲ್ಲಿ ಚೆನ್ನಾಗಿ ಮಾಗಿದ ಗೊಬ್ಬರ ಮರಳು ಹಾಗೂ ಕೆಂಪು ಮಣ್ಣನ್ನು ಮಿಶ್ರ ಮಾಡಿ ತುಂಬಿ, ಸಾಲಾಗಿಟ್ಟು ಚೆನ್ನಾಗಿ ನೀರನ್ನು ಹಾಕಬೇಕು. ಸೂರ್ಯನ ಪ್ರಖರತೆ ಕಡಿಮೆಯಾದ ನಂತರ ಬೇರುಗಳು ಹಾಳಾಗದಂತೆ ಸ್ವಲ್ಪ ಮಣ್ಣು ಬೇರಿಗಂಟಿಕೊಂಡಿರುವಂತೆ ತೆಗೆದು ನಾಟಿ ಮಾಡಬೇಕು. ನಂತರ ಸುಮಾರು ಒಂದು ತಿಂಗಳಾದರೂ ನೆರಳಿನಲ್ಲಿರುವಂತೆ ನೋಡಿಕೊಳ್ಳಬೇಕು. ಹೀಗೆ ಮಾಡುವುದರಿಂದ ಹೆಚ್ಚು ಗಿಡಗಳು ಹಾಳಾಗುವುದಿಲ್ಲ. ಒಂದು ತಿಂಗಳು ದಿನಕ್ಕೆ ಎರಡು ಬಾರಿಯಂತೆ, ನಂತರದ ದಿನಗಳಲ್ಲಿ ದಿನಕ್ಕೆ ಒಂದು ಸಲದಂತೆ ನೀರನ್ನು ಹಾಕಬೇಕು. ಅನಗತ್ಯ ಕಳೆಯನ್ನು ಕೀಳುತ್ತಿರಬೇಕು. ಸಸಿಗಳ್ಳು ೯ ರಿಂದ೧೦ ತಿಂಗಳ ಅವಧಿಯೊಳಗೆ ಚೆನ್ನಾಗಿ ಬೆಳೆದು ನಾಟಿ ಮಾಡಲು ಯೋಗ್ಯವಾಗುತ್ತದೆ. ಈ ಅವಧಿಯಲ್ಲಿ ಸುಮಾರು ೬೦ ರಿಂದ ೭೦ ಸೆಂಟಿ ಮೀಟರ್ ಎತ್ತರಕ್ಕೆ ಬೆಳೆದಿರುತ್ತವೆ.

**ಬೇವು ಜೀವನದಲ್ಲಿ ಬರುವ ಸುಖ ದುಃಖಗಳ ಸಂಕೇತ. ಆದಕ್ಕೆ ಹಿಂದುಗಳು ಯುಗಾದಿಯಂದು ಬೆಲ್ಲದ ಜೊತೆಗೆ ಬೇವನ್ನು ಸೇರಿಸಿ ನೆಂಟರಿಷ್ಟರೊಂದಿಗೆ ಸ್ನೇಹಿತರೊಂದಿಗೆ ವಿನಿಮಯ ಮಾಡಿಕೊಳ್ಳುತ್ತಾರೆ. ಜೀವನದಲ್ಲಿ ಬರುವ ಕಷ್ಟ ಸುಖಗಳನ್ನು ಸಮನ್ವಯ ದೃಷ್ಟಿಯಿಂದ ಸ್ವಾಗತಿಸಬೇಕೆಂಬ ಸಂದೇಶವನ್ನು ಪರೋಕ್ಷವಾಗಿ ನೀಡುತ್ತದೆ**

ಬೇವಿನ ಮರಗಳನ್ನು ತೋಪುಗಳನ್ನಾಗಿಯೂ ಬೆಳೆಯಬಹುದು. ಹೀಗೆ ಬೆಳೆಯುವಾಗ ತೋಪಿನ ಸುತ್ತಲೂ ಬೇಲಿಯನ್ನು ಹಾಕಬೇಕು. ಇದರಿಂದ ಜಾನುವಾರುಗಳಿಂದ ರಕ್ಷಣೆ ಮಾಡಲು ಅನುಕೂಲವಾಗುತ್ತದೆ.

### *ಉಪಯೋಗ*

ಬೇವಿನ ಮರವನ್ನು ಔಷಧಿ ಮರವೆಂದೂ ಕರೆಯುವುದು ಉಂಟು. ಈ ಮರದ ಪ್ರತಿಯೊಂದು ಭಾಗವೂ ಉಪಯೋಗಕ್ಕೆ ಬರುತ್ತದೆ. ತಂಪಾದ ಹಾಗೂ ಉತ್ತಮವಾದ ಗಾಳಿಯನ್ನು ನೀಡುವುದಲ್ಲದೆ ಒಳ್ಳೆಯ ನೆರಳನ್ನು ನೀಡುತ್ತದೆ. ಈ ಮರದ ತೊಗಟೆ, ಗೋಂದು, ಚಿಗುರು, ಎಲೆ, ಹೂವು,

ಬೀಜ, ಎಣ್ಣೆಯನ್ನು ತೆಗೆದ ಹಿಂಡಿ, ಹಾಗೂ ಬೇವಿನ ರಸ, ಎಲ್ಲವನ್ನು ಔಷಧಿಯಾಗಿ ಉಪಯೋಗಿಸಲಾಗುತ್ತದೆ. ಕ್ರಿಮಿನಾಶಕ ಗುಣವನ್ನು ಹೊಂದಿರುವ ಇದರ ಎಲೆಗಳು ಸೊಳ್ಳೆಗಳ ಕಾಟವನ್ನು ನಿವಾರಿಸಲು ಬಳಸಲಾಗುತ್ತದೆ. ಇದರ ಎಲೆಗಳನ್ನು ಕೆಂಡದ ಮೇಲೆ ಹಾಕುವುದರಿಂದ ಅದರಿಂದ ಬರುವ ಹೊಗೆ ಸೊಳ್ಳೆಗಳನ್ನು ಓಡಿಸುತ್ತವೆ. ಅಲ್ಲದೆ ಎಲೆಗಳನ್ನು ಬಿಸಿ ನೀರಿನಲ್ಲಿ ಹಾಕಿಸ್ನಾನ ಮಾಡಿದರೆ ಹಲವಾರು ಚರ್ಮ ರೋಗಗಳು ವಾಸಿಯಾಗುತ್ತವೆ ಎಂದು ಹೇಳುತ್ತಾರೆ.

ನಮ್ಮ ಗ್ರಾಮೀಣರಿಗೆ ರೆಂಬೆಗಳ ಎಳೆ ಕಡ್ಡಿಗಳೇ ಹಲ್ಲುಜ್ಜುವ ಬ್ರಷ್. ಇವರು ಯಾವುದೇ ಬ್ರಾಂಡಿನ ಟೂತ್ ಪೇಸ್ಟ್‌ಬಗ್ಗೆ ತಲೆ ಕೆಡಿಸಿಕೊಳ್ಳುವುದಿಲ್ಲ. ಬೇವಿನ ಕಡ್ಡಿಯಿಂದ ಹಲ್ಲುಜ್ಜುವುದರಿಂದ ಹಲ್ಲುಗಳ ಸ್ವಚ್ಛವಾಗುವುದರ ಜೊತೆಗೆ ದಂತಕ್ಕೆ ಸಂಬಂಧಸಿದ ಅನೇಕ ರೋಗಗಳು ಗುಣವಾಗುತ್ತವೆ. ಬೇವಿನ ಹಣ್ಣುಗಳಿಂದ ಎಣ್ಣೆಯನ್ನು ತೆಗೆಯುತ್ತಾರೆ. ಇದನ್ನು ಔಷಧಿಗಾಗಿ, ಬಣ್ಣ ಕಟ್ಟುವುದಕ್ಕಾಗಿ, ಸಾಬೂನು ಹಾಗೂ ಟೂತ್‌ಪೇಸ್ಟ್ ತಯಾರಿಕೆಯಲ್ಲಿ ಉಪಯೋಗಿಸಲಾಗುತ್ತಿದೆ. ಗ್ರಾಮೀಣ ಪ್ರದೇಶದಲ್ಲಿ ದೀಪ ಉರಿಸಲು ಉಪಯೋಗಿಸುತ್ತಾರೆ. ಹಿಂಡಿಯನ್ನು ಗೊಬ್ಬರವಾಗಿ ಬಳಸುತ್ತಾರೆ. ಇದು ಅತ್ಯುತ್ತಮ ಗೊಬ್ಬರವಾಗಿದ್ದು, ಇದರ ಬಳಕೆಯಿಂದ ಸುಮಾರು ೨೫ ರಿಂದ ೫೦ ಭಾಗ ರಾಸಾಯನಿಕ ಗೊಬ್ಬರದ ಬಳಕೆಯನ್ನು ಉಳಿಸಬಹದು. ಈ ಗೊಬ್ಬರ ಕ್ರಿಮಿನಾಶಕ ಗುಣವನ್ನು ಹೊಂದಿದ್ದು ಕಬ್ಬನ್ನು ನೆಡುವಾಗ ಗೆದ್ದಿಲು ಹಿಡಿಯುವುದನ್ನು ತಪ್ಪಿಸಲು ಉಪಯೋಗಿಸೆಲಾಗುತ್ತಿದೆ.

ಬೇವಿನ ತೊಗಟೆ ಮತ್ತು ಹಣ್ಣುಗಳನ್ನು ಬಲವರ್ಧನೆಗೂ, ಎಣ್ಣೆ, ಬೀಜ ಮತ್ತು ಎಲೆಗಳನ್ನು ಕೀಟನಾಶಕ ಹಾಗೂ ಗಾಯಗಳು ಬಾತುಕೊಂಡು ಕೀವಾಗದಂತೆ ರಕ್ಷಿಸಲು ಬಳಸುತ್ತಾರೆ. ಇದರ ಹೂವುಗಳನ್ನು ಉದರ ಬೇನೆಗೂ,ಇದರ ಎಲೆಗಳನ್ನು ಸಿಡುಬು ರೋಗ ಹಾಗೂ ಜ್ವರದ ನಿವಾರಣೆಗಾಗಿ ಬಳಸುತ್ತಾರೆ. ಅಲ್ಲದೆ ಬೇವಿನ ಎಣ್ಣೆಯನ್ನು ಮಲೇರಿಯಾ, ಕಾಮಾಲೆ, ಮೂಲವ್ಯಾಧಿ ಮೊದಲಾದ ರೋಗಗಳನ್ನು ಗುಣಪಡಿಸಲು ಬಳಸುತ್ತಾರೆ.

**ಪೀಠೋಪಕರಣಗಳು**

ಬೇವಿನ ಮರದ ಒಳಭಾಗ ತುಂಬಾ ಗಟ್ಟಿಯಾಗಿದ್ದು ಗಾಳಿ, ಬಿಸಿಲು, ಮಳೆಗೆ ಬೇಗ ಹಾಳಾಗುವುದಿಲ್ಲ. ಮನೆ ಬಾಗಿಲು, ಕಿಟಕಿ, ವ್ಯವಸಾಯಕ್ಕೆ ಸಂಬಂಧಿಸಿದ ನೇಗಿಲು, ಕುಂಟೆ ಮೊದಲಾದವುಗಳನ್ನು ತಯಾರಿಸಲು ಹಾಗೂ ಕುರ್ಚಿ, ಮೇಜು ಮೊದಲಾದ ಪೀಠೋಪಕರಣಗಳನ್ನು ಮಾಡಲು ಉಪಯೋಗಿಸುತ್ತಾರೆ.

**ಮೇವಿಗಾಗಿ**

ಇದರ ಎಲೆಗಳನ್ನು ಆಡುಗಳಿಗೆ ಮೇವಿಗಾಗಿ ಬಳಸುತ್ತಾರೆ. ಒಂದು ಮರದಿಂದ ಪ್ರತಿ ವರ್ಷ ೧೦೦ ರಿಂದ ೫೦೦ ಕೆ.ಜಿ. ಬೀಜ ದೊರೆಯುತ್ತದೆ. ಒಂದು ಕೆ.ಜಿಗೆ೭೫ರಿಂದ ೯೦ ಪೈಸೆ ಬೆಲೆ ಇದೆ. ವರ್ಷಕ್ಕೆ ಒಂದು ಮರದಿಂದ೫೦ ರಿಂದ ೨೫೦ ರೂ.ಗಳವರೆಗೆ ಬೀಜದಿಂದಲೇ ಆದಾಯ ಬರುತ್ತದೆ.

ಈ ಮರಗಳನ್ನು ಬೆಳೆಸಲು ಆಸಕ್ತಿ ಇರುವವರು ತಮಗೆ ಸಮೀಪವಿರುವ ವಲಯ ಅರಣ್ಯಾಧಿಕಾರಿಗಳ ಕಛೇರಿಯಿಂದ ತಮಗೆ ಬೇಕಾದ ಮಾಹಿತಿ ಹಾಗೂ ಸಸಿಗಳನ್ನು ಪಡೆಯಬಹುದು.



'ಅನ್ನದಾನ, ವಿದ್ಯಾದಾನಗಳನ್ನು ಮಠಮಾನ್ಯಗಳು ನಿರಂತರವಾಗಿ ನಡೆಸಿಕೊಂಡು ಬಂದಿರುವುದರಿಂದಲೇ ಸಮಾಜ ಇನ್ನೂ ಅಧೋಗತಿಯತ್ತ ತಲುಪಿಲ್ಲ. ಸಾಮಾಜಿಕ ಸೇವೆಗೆ ತಮ್ಮನ್ನೇ ಅರ್ಪಣೆ ಮಾಡಿಕೊಂಡಿರುವ ಇಂಥ ಸಿದ್ಧಗಂಗಾ ಶ್ರೀ ಶ್ರೀಗಳವರು ಇರುವುದರಿಂದಲೇ ಸಮಾಜದಲ್ಲಿ ಮೌಲ್ಯಗಳು ಇನ್ನೂ ಜೀವಂತವಾಗಿ ಉಳಿದುಕೊಂಡಿದೆ. ಇದನ್ನು ಸರ್ವರೂ ಸ್ವಾಗತಿಸಿ, ಬೆಂಬಲಿಸಿದಾಗ ಮಾತ್ರ ಸಮಾಜದಲ್ಲಿ ಸುಖಶಾಂತಿ ನೆಮ್ಮದಿ ದೊರೆಯುತ್ತದೆ.'

- ಪರಮಪೂಜ್ಯ ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು
ಶ್ರೀ ಸುತ್ತೂರು ಮಠ

(ಶ್ರೀ ಮಹದೇಶ್ವರ ದರ್ಶನಮ್ - ಧಾರ್ಮಿಕ ಮಾಸ ಪತ್ರಿಕೆ - ೧೯೯೭ರ ಮೇ ಸಂಚಿಕೆ ಪುಟ೧೧)





# ಆಲೂಗೆಡ್ಡೆ

-- ಬಿ. ಸುಬ್ರಾಯ ಅಡಿಗ

ನೀವು ಇಡೀ ವರ್ಷ ಅದೆಷ್ಟು ಬಟಾಟೆ (ಆಲೂಗಡ್ಡೆ) ತಿನ್ನುತ್ತೀರೆಂದು ಎಂದಾದರೂ ಯೋಚಿಸಿದ್ದೀರಾ? ಲೆಕ್ಕಮಾಡಿ ಹೇಳುವುದು ಕಷ್ಟವಾದರೂ ಪ್ರತಿಯೊಬ್ಬರೂ ಸಾಧಾರಣ ತನ್ನ ಭಾರದಷ್ಟೇ ಬಟಾಟೆ ತಿನ್ನುತ್ತಾರೆಂದು ಹೇಳಬಹುದು. ಇಷ್ಟು ಬಟಾಟೆ ತಿಂದರೂ ನಿಮಗೆ ಅದರಿಂದ ದೊರಕಬೇಕಾದಷ್ಟು ಪೋಷಕಾಂಶ ದೊರೆಯುತ್ತದೆಯೇ?

ಆಲುಗೆಡ್ಡೆಗಳು ಶಕ್ತಿದಾಯಕ ಪದಾರ್ಥ. ಅದನ್ನು ತಿಂದ ಬಳಿಕ ನಿಮ್ಮಲ್ಲಿ ಸ್ಫೂರ್ತಿ ಹಾಗೂ ಕೆಲಸ ಮಾಡುವ ಶಕ್ತಿ ಉಂಟಾಗುತ್ತದೆ. ಬಟಾಟೆ ಘನ ಆಹಾರ. ಅದನ್ನು ಸರಿಯಾಗಿ ಬೇಯಿಸಿದರೆ ಒಳ್ಳೇ ರುಚಿಕರವೂ ಆಗುವುದು. ಮೊದಲು ಯುರೋಪಿನ ಅಧಿಕಾಂಶ ದೇಶಗಳಲ್ಲಿ ಚಳಿಗಾಲದ ವೇಳೆ ಯಾವ ತರಕಾರಿಯೂ ಸಿಗುತ್ತಿರಲಿಲ್ಲ. ಅದರಿಂದಾಗಿ ಜನ ದುರ್ಬಲರೂ ತೇಜೋಹೀನರೂ ಆಗಿರುತ್ತಿದ್ದರು. ಆಗ ಬಟಾಟೆಯೇ ಅವರನ್ನು ರಕ್ಷಿಸುತ್ತಿತ್ತು. ಹಲ್ಲುಗಳ ಅಲುಗಾಟ ಹಾಗೂ ವಸಡುಗಳ ರಕ್ತಸ್ರಾವಕ್ಕೆ ಬಟಾಟೆಯೇ ಔಷಧಿಯೆಂದು ಪರಿಗಣಿಸಲ್ಪಡುತ್ತಿತ್ತು. ವಿಟಾಮಿನ್‌ಗಳ ಆವಿಷ್ಕಾರವಾದ ಬಳಿಕ ಅವರ ಆ ನಂಬುಗೆಗೆ ಆಧಾರವೂ ದೊರೆಯಿತು. ಏಕೆಂದರೆ ವಸಡುಗಳನ್ನು ಗಟ್ಟಿಗೊಳಿಸುವ ವಿಟಮಿನ್ 'ಸಿ' ಬಟಾಟೆಯಲ್ಲಿ ಬಹಳಷ್ಟಿದೆ. ವಿಟಮಿನ್ 'ಬಿ' ಸಾಧಾರಣಾ ಪ್ರಮಾಣದಲ್ಲಿದೆ. ಬಟಾಟೆಯಲ್ಲಿ ಆರೋಗ್ಯವರ್ಧಕ ಹಾಗೂ ಶಕ್ತಿವರ್ಧಕ ಗುಣವಿದೆ. ದೊಡ್ಡ ಬಟಾಟೆಯೊಂದೇ ನಿಮಗೆ ಇಡೀ ದಿನಕ್ಕೆ ಬೇಕಾಗುವ ವಿಟಮಿನ್ 'ಸಿ'ಯ ಕಾಲುಭಾಗವನ್ನೂ ಪೂರೈಸಬಲ್ಲುದು.

**ಆಲೂಗೆಡ್ಡೆ ಬೇಯಿಸುವ ವಿಧಾನ**

ಆಲೂಗೆಡ್ಡೆಯ ಪೂರ್ತಿಲಾಭ ಪಡೆಯುವ ರಹಸ್ಯ ಅದನ್ನು ಬೇಯಿಸುವ ರೀತಿಯಲ್ಲಿ ಅಡಗಿದೆ. ಬಟಾಟೆಯನ್ನು ಸಿಪ್ಪೆ ತೆಗೆಯದೆಯೇ ಬೇಯಿಸಬೇಕು. ಅದರಲ್ಲೂ ಆವಿಯಿಂದ ಬೇಯಿಸುವುದು ಅತ್ಯುತ್ತಮ ಕ್ರಮ. ಚೆನ್ನಾಗಿ ಬೆಂದ ಬಳಿಕ ಕೆಳಗಿಳಿಸಿ ಸಿಪ್ಪೆಸಹಿತ ಬಟಾಟೆಯನ್ನು ಉಪಯೋಗಿಸುವುದೇ ಮೇಲು. ಏಕೆಂದರೆ ಬಟಾಟೆಯ ಸಿಪ್ಪೆ ಮಲಬದ್ಧತೆಗೆ ದಿವ್ಯ ಔಷಧಿ.

ಸಂಶೋಧಕರ ಪ್ರಕಾರ ಉಗಿಯಿಂದ ಬೇಯಿಸಿದ ಬಟಾಟೆಗಳಲ್ಲಿ ವಿಟಮಿನ್ 'ಸಿ' ಸಂಪೂರ್ಣವಾಗಿ ಉಳಿಯುತ್ತದೆ. ಆದರೆ ಬೆಂಕಿಯಲ್ಲಿ ಸುಟ್ಟಾಗ ೨೦% ರಷ್ಟು, ಬೇಯಿಸುವ ಮೊದಲು ಚೂರಿಯಿಂದ ಸಿಪ್ಪೆ ತೆಗೆದರೆ ೫೦%ರಷ್ಟು ನಾಶವಾಗುತ್ತದೆ.

**ಆಲೂಗಡ್ಡೆ ಮತ್ತು ಬೊಜ್ಜು**

ಬಟಾಟೆ ತಿಂದರೆ ಬೊಜ್ಜು ಬೆಳೆಯುತ್ತದೆಂದು ಎಷ್ಟೋ ಜನ ಭಾವಿಸಿದ್ದಾರೆ. ಬೊಜ್ಜು ತಪ್ಪಿಸಿಕೊಳ್ಳುವುದಕ್ಕಾಗಿ ಅವರು ಬಟಾಟೆಯನ್ನು ವರ್ಜಿಸುತ್ತಾರೆ. ಆದರೆ ನಿಜ ಸಂಗತಿಯೇನೆಂದರೆ, ಊಟಕ್ಕೆ ಬರೀ ಬಟಾಟೆ ಹಾಗೂ ಮಜ್ಜಿಗೆಯನ್ನು ಉಪಯೋಗಿಸಿದರೆ ಪ್ರತಿ ವಾರವೂ ಅನೇಕ ಪೌಂಡ್ ಭಾರ ತಗ್ಗಿಸಬಹುದು. ನೀವು ನಿಮ್ಮ ಭಾರ ಇಳಿಸಬೇಕಿದ್ದರೂ ಬಟಾಟೆ ಬಳಸಬಹುದು. ಆದರೆ ನೀವು ಬಟಾಟೆಯ ಹಲ್ವಾ ತಿಂದರೆ, ಅಥವಾ ಬಟಾಟೆಯನ್ನು ಎಣ್ಣೆಯಲ್ಲಿ ಕರಿದು ತಿಂದರೆ ತೂಕ ಕಡಿಮೆಯಾಗುವ ಬದಲು ಹೆಚ್ಚಾಗುವ ಸಾಧ್ಯತೆಯಿದೆ. ಬಟಾಟೆ ಬಲು ಸುಲಭವಾಗಿ ಜೀರ್ಣವಾಗುತ್ತದೆ. ಅನ್ನವನ್ನು ಜೀರ್ಣಿಸಿಕೊಳ್ಳಲಾಗದ ಮುದುಕರೂ ಅಶಕ್ತರೂ ಬಟಾಟೆಯನ್ನು ಸುಲಭವಾಗಿ ಜೀರ್ಣಿಸಿಕೊಳ್ಳಬಲ್ಲರು. ಆದ್ದರಿಂದ ಅವರ ಪಾಲಿಗೂ ಬಟಾಟೆ ಆದರ್ಶ ಆಹಾರ. ಕೊಬ್ಬು ಸೇವಿಸಲಾಗದ ಯಕೃತ್ ರೋಗಿಗಳು ಬಟಾಟೆಯನ್ನು ನಿರ್ಭಯವಾಗಿ ಬಳಸಬಹುದು.

**ಆಲೂಗೆಡ್ಡೆ ಕೊಳ್ಳುವಾಗ....**

೧. ಆಲೂಗೆಡ್ಡೆಗಳು ದೊಡ್ಡದೂ, ಪುಷ್ಟವೂ ಆಗಿರಬೇಕು. ರಾಸಾಯನಿಕ ಗೊಬ್ಬರ ಉಪಯೋಗಿಸಿ ಭೂಮಿಯಲ್ಲಿ ಬೆಳೆಯಬಹುದು ಉತ್ತಮ.

೨. ನಯವಾಗಿ ಒಂದೇ ರೀತಿಯ ಆಲೂಗೆಡ್ಡೆಯನ್ನು ಆಯ್ಕೆಮಾಡಿ.

೩. ಅಂದಗೆಟ್ಟ ಬಟಾಟೆಗಳನ್ನು ಕೊಳ್ಳಬೇಡಿ. ಹಸುರು ಕಲೆ ಇರುವವೂ ಒಳ್ಳೆಯದಲ್ಲ. ಮೇಲೆ ನೀರಿನ ಪಸೆಯಿರುವ ಗಡ್ಡೆಗಳು ಅವು ಕೊಳೆಯುತ್ತಿವೆಯೆಂಬುದರ ಪೂರ್ವ ಸಂಕೇತ ನೀಡುತ್ತವೆ.

**ಆಲೂಗೆಡ್ಡೆಯ ರಕ್ಷಣೆ**

ಆಲೂಗೆಡ್ಡೆಯನ್ನು ಬಹುದಿನಗಳವರೆಗೆ ಇಡಬಹುದು. ತೆಳು ಸಿಪ್ಪೆಯ ಹೊಸ ಗಡ್ಡೆಗಳು ಬೇಗ ಕೊಳೆಯುತ್ತವೆ. ದಪ್ಪ ಸಿಪ್ಪೆಯವೇ ಇಡಲು ಉತ್ತಮ. ತಂಪಾಗಿರುವ ಕತ್ತಲ ಕೋಣೆಯಲ್ಲಿ ಅವನ್ನಿರಿಸಬೇಕು. ಅಂಥ ಜಾಗ ಇಲ್ಲದೆ ಹೋದರೆ ಅವನ್ನು ಕಾಗದದಿಂದ ಸುತ್ತಿ ಇಡಿರಿ. ಬೆಚ್ಚಗಿನ ಜಾಗದಲ್ಲಿದ್ದರೆ ಅವು ಹಸುರಾಗಿ ಮೊಳಕೆ ಬರುವವು.

*Printed at : Geetanjali Printers, Bangalore-54*

